# . ಅಬ್ದುಲ್ ಸತ್ತಾರ್ ಅವರ ಸಾಹಿತ್ಯ

ಕನ್ನಡ ಎಂ.ಫಿಲ್ ಪದವಿಗಾಗಿ

ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ


ಸಂಶೋಧಕರು

.ಮನುಕುಮಾರ. ಬಿ. ಎಸ್.

ಮಾರ್ಗದರ್ಶಕರು

ಡಾ.ಚಿಕ್ಕಮರಳಿ ಬೋರೇಗೌಡ





ಕರ್ನಾಟಕ ಸಂಘ (ರಿ), ಮಂಡ್ಯ

ಎಂಎಲ್ ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ ಹಂಪಿಮಾನ್ಯತೆ ಪಡೆದಿದೆ) 2011-12

# ಅಬ್ದುಲ್ ಸತ್ತಾರ್ ಅವರ ಸಾಹಿತ್ಯ

ಕನ್ನಡ ಎಂ.ಫಿಲ್ ಪದವಿಗಾಗಿ

ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ


ಸಂಶೋಧಕರು

.ಮನುಕುಮಾರ. ಬಿ.ಎಸ್.

ಮಾರ್ಗದರ್ಶಕರು

ಡಾ.ಚಿಕ್ಕಮರಳಿ ಬೋರೇಗೌಡ



ಕರ್ನಾಟಕ ಸಂಘ (ರಿ), ಮಂಡ್ಯ

ಎಂಎಲ್ ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ ಹಂಪಿಮಾನ್ಯತೆ ಪಡೆದಿದೆ) 2011-12

977

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಪಿ.ಅಬ್ದುಲ್ ಸತ್ತಾರ್ ಅವರ ಸಾಹಿತ್ಯ ಎಂಬ ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್ (ಕನ್ನಡ) ಪದವಿಗಾಗಿ ಡಿ.ಎಸ್.ಮನುಕುಮಾರ ಅವರು ನನ್ನ ಮಾರ್ಗದರ್ಶನ ಹಾಗೂ ಮೇಲ್ವಿಚಾರಣೆಯಲ್ಲಿ ಬರೆದು ಒಪ್ಪಿಸುತ್ತಿದ್ದಾರೆ. ಹಾಗೂ ಪ್ರಸ್ತುತ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗೆ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರ ಸಹಿ

ಡಾ.ಬೋರೇಗೌಡ ಚಿಕ್ಕಮರಳಿ
ಸಂಪನ್ಮೂಲವ್ಯಕ್ತಿ
ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ), ಮಂಡ್ಯ.

ಸ್ಥಳ : ಮಂಡ್ಯ

ದಿನಾಂಕ : 27-06-2012

# ಸಂಶೋಧಕರ ಪ್ರಮಾಣ ಪತ್ರ

ಹಂಪಿ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಗೌಡ ಸಂಶೋಧನಾ ಕೇಂದ್ರದಲ್ಲಿ 2011-12 ನೇ ಸಾಲಿನ ಕನ್ನಡ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು "ಶ್ರೀ ಅಬ್ದುಲ್ ಸತ್ತಾರ್ ಅವರ ಸಾಹಿತ್ಯ "ವನ್ನು ಆಯ್ಕೆ ಮಾಡಿಕೊಂಡು ಡಾ॥ ಚಿಕ್ಕಮರಳಿ ಬೋರೇಗೌಡ ರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧ ರಚಿಸಿರುತ್ತೇನೆ.

ಈ ನಿಬಂಧವನ್ನಾಗಲೀ ನಿಬಂಧದ ಯಾವುದೇ ಅಧ್ಯಾಯವನ್ನು ಬೇರೆ ಎಲ್ಲಿಯೂ ಪ್ರಕಟಿಸಿರುವುದಿಲ್ಲ. ಮತ್ತು ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್ ಕನ್ನಡ ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

.ಮನುಕುಮಾರ, ಡಿ.ಎಸ್.

ಸಂಶೋಧಕರು

ಕನ್ನಡ ವಿಭಾಗ

ಕರ್ನಾಟಕ ಸಂಘ (ರಿ), ಮಂಡ್ಯ

ಎಂಎಲ್ ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ ಹಂಪಿಮಾನ್ಯತೆ ಪಡೆದಿದೆ) 2011-12

ಸ್ಥಳ : ಮಂಡ್ಯ

ದಿನಾಂಕ : 27-06-2012

# ಪಿ. ಅಬ್ದುಲ್ ಸತ್ತಾರ್ ಅವರ ಸಾಹಿತ್ಯ

ಕನ್ನಡ ಎಂ.ಫಿಲ್ ಪದವಿಗಾಗಿ

ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ

2011-12

ನೋಂದಣಿ ಸಂಖ್ಯೆ – **KRSMKS-00557**

# ವಿಷಯ ಸೂಚಿ (ಪರಿವಿಡಿ)

# ೧. ಅಧ್ಯಯನ ಉದ್ದೇಶ –ವ್ಯಾಪ್ತಿ

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕನ್ನಡಕ್ಕಾಗಿ. ಕನ್ನಡದ ಉಳಿವಿಗಾಗಿ ಹೆಣಗಾಡುತ್ತಿರುವ ಸಂದರ್ಭದಲ್ಲಿ ಉದಯೋನ್ಮುಖ ಬರಹಗಾರರು ತಮ್ಮ ಬರವಣಿಗೆಯ ಮೂಲಕ ಕನ್ನಡ ಸತ್ವಕ್ಕೆ ನೀರೆರಿದ್ದಾರೆ.

ಇಂತಹ ಬರವಣಿಗೆಯ ಕೃಷಿಯನ್ನು ನೆರವೇರಿಸಿದವರು ಅಪ್ಪಟ ಗ್ರಾಮೀಣ ಪ್ರತಿಭೆಯೆನಿಸಿದ್ದು ಅಲ್ಪ ಸಂಖ್ಯಾತರ ವರ್ಗಕ್ಕೆ ಸೇರಿದ್ದು. ಮಾತೃಭಾಷೆ ಉರ್ದುವಾದರೊ. ಕನ್ನಡ ಸಾಹಿತ್ಯ ಕೃಷಿಯನ್ನು ಬಹಳ ನಿರರ್ಗಳವಾಗಿ ನೆರವೇರಿಸಿದ ಕೀರ್ತಿ ಪಿ. ಅಬ್ದುಲ್ ಸತ್ತಾರ್‌ರವರದು.

20 ನೇ ಶತಮಾನದಲ್ಲಿ ಭಾರತೀಯ ಜನಜೀವನ ಪರಿಸ್ಥಿತಿಯನ್ನು ಅಧಾರವಾಗಿಸಿಕೊಂಡು ಬ್ರಿಟಿಷರ ದಬ್ಬಾಳಿಕೆ ದೇಶದ ಉಳಿವಿಗಾಗಿ ಹೋರಾಟ ಮಾಡಿದ ಮಹಾನ್ ವ್ಯಕ್ತಿಗಳ ಧೈರ್ಯ, ಸಾಹಸಗಳ, ಒಂದು ವಿಚಾರಧಾರೆಯನ್ನು ತಮ್ಮ ಸಾಹಿತ್ಯದಲ್ಲಿ ರಚಿಸಿರುವುದು ಸರಿ. ಈ ರೀತಿಯ ಸಾಹಿತ್ಯ ಲೇಖರಲ್ಲಿ ಇವರು ಕೂಡ ಒಬ್ಬರು.

ಪಿ ಅಬ್ದುಲ್ ಸತ್ತಾರ್ ಅವರ ಸಾಹಿತ್ಯದಲ್ಲಿ ವಿಸ್ತಾರ ಇವರು ಕನ್ನಡದಲ್ಲಿ ಕಾದಂಬರಿಗಳು–(ಐತಿಹಾಸಿಕ ಮತ್ತು ಸಾಮಾಜಿಕ ಕಾದಂಬರಿಗಳು)ಕವನಗಳು, ನಾಟಕಗಳು ಸಂಶೋಧನಾ ಕೃತಿಗಳನ್ನು ಬರೆದಿದ್ದಾರೆ. ಇವರು ಸಾಹಿತ್ಯ ಕೃಷಿಯನ್ನೆ ಅಲ್ಲದೇ ಆಕಾಶವಾಣಿ, ಪತ್ರಿಕೆಗಳಗೆ ತಮ್ಮದೆ ಆದ ಕೊಡುಗೆಯನ್ನು ನೀಡಿದ್ದಾರೆ. ಇವರು ಶಾಸನಗಳ ಶೋಧನೆ. ಪುರಾತತ್ವ ನೆಲೆಗಳ ಅಧ್ಯಯನ, ಖನಿಜಗಳು, ಮುಂತಾದವುಗಳ ಶೋಧ ಕಾರ್ಯದ ಸಾಹಿತ್ಯದಲ್ಲಿ ದುಮುಕಿ ಹಲವಾರು ಪತ್ತೆದಾರಿ ಲೇಖನಗಳನ್ನು ಬರೆದಿದ್ದಾರೆ.

ಇವರು ಸಂಪ್ರಾದಾಯಕವಾಗಿ ವಿಶೇಷವಾದ ಸಾಹಿತ್ಯ ರಚನೆ ಮಾಡಿದ್ದು. ಐತಿಹಾಸಿಕ ಸಾಮಾಜಿಕ ಕ್ಷೇತ್ರದಲ್ಲಿ ಬರುವ ವೀರರು. ನಾಯಕರು ಹಿಂದಿನ ಆಡಳಿತ ಸುಧಾರಣೆಯ ಬಗ್ಗೆ ತಮ್ಮ ಸಾಹಿತ್ಯದ ಮೂಲಕ ಅವರ ಸಾಧನೆಯ ಚಿತ್ರಣವನ್ನು ಇಂದಿನ ಜನರಿಗೆ ಸಾಹಿತ್ಯದಲ್ಲಿ ಸಾದರ ಪಡಿಸಿದ್ದಾರೆ. ಗತಕಾಲದ ಸಂಸ್ಕೃತಿ. ಆಡು ಭಾಷೆ, ಬ್ರಿಟಿಷರು ನಡೆಸುತ್ತಿದ್ದ ದಬ್ಬಾಳಿಕೆಯ ವಿರುದ್ಧ ಹೋರಾಡಿ ಹುತಾತ್ಮರಾದ ನಾಯಕರ ಜೀವನ ಚರಿತ್ರೆ ಅರಿಯಲು ಸಾಹಿತ್ಯದಲ್ಲಿ ರಚಿಸಿದ್ದಾರೆ.

ಪಿ.ಅಬ್ದುಲ್ ಸತ್ತಾರ್‌ರವರು ತಮ್ಮ ಸಾಹಿತ್ಯದ ರಚನೆಯ ಉದ್ದೇಶವನ್ನು ಗಮನಿಸಿವುದಾದರೆ ಇವರು ಐವತ್ತರ ದಶಕದಿಂದ ಈಚೆಗೆ ಬರಹಕ್ಕೆ ಕೈ ಹಾಕಿದರು. ಸ್ವತಂತ್ರ್ಯ ನಂತರ ಸ್ವತಂತ್ರ್ಯ ಬರುವ ಮೊದಲನಿಂದಲ್ಲೂ ನಾಡಿನ ಐತಿಹಾಸಿಕ ವೀರರು ಪಾಳೆಗಾರರು ಆಡಳಿತ ವ್ಯವಸ್ಥೆ ಸಮಾಜದಲ್ಲಿನ ಹಾಗೂ – ಹೋಗುಗಳ ಬಗ್ಗೆ ತಮ್ಮ ಲೇಖನದ ಮೂಲಕ ಜನರ ಮನಸ್ಸನ್ನು ಮುಟ್ಟುವ ಕಾರ್ಯಕ್ಕೆ ಮತ್ತು ಇದರಿಂದ ಜನರು ಸಾಮಾಜಿಕವಾಗಿ, ರಾಜಕೀಯವಾಗಿ, ಸಾಹಿತ್ಯಿಕವಾಗಿ ತಮ್ಮ ನಿಲುವುಗಳನ್ನು ಬದಲಾಯಿಸಿಕೊಳ್ಳುವಂತೆ ಮಾಡಿರುವುದು ಸ್ವಾಗತಾರ್ಹ ವಿಚಾರವಾಗಿದೆ.

ಅಬ್ದುಲ್ ಸತ್ತಾರ್ ಅವರು ತಮ್ಮ ಲೇಖನದಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಕೇವಲ ಏಕಮುಖ ಸಾಹಿತ್ಯದ ರಚನೆಗೆ ಕೈ ಹಾಕದೇ ಕಾದಂಬರಿ ನಾಟಕಗಳು, ಸಾಮಾಜಿಕವಾದ ಪ್ರೇರಣೆಗಳು ನಾಡನ್ನು ಆಳಿದ ವೀರರ ಚರಿತ್ರೆಯ ವಿಚಾರವನ್ನು ಬಹಳ ಸರಳವಾಗಿ ಜನರಿಗೆ ಅರ್ಥವಾಗುವ ಭಾಷ ಪ್ರೌಢಿಮೆಯಲ್ಲಿ ರಚಿಸಿರುವುದು ಶ್ಲಾಘನಿಯ ವಿಚಾರವಾಗಿದೆ.

# ೭.ಅಬ್ದುಲ್ ಸತ್ತಾರ್ ಅವರ ಜೀವನ :–

ಪಾಂಡವಪುರ (ಫ್ರೆಂಚ್ ರಾಕ್ಸ್) ತಾಲ್ಲೋಕು ಕೇಂದ್ರದಿಂದ ಪೂರ್ವದಿಕ್ಕಿಗೆ ಸುಮಾರು 5. ಕಿಮೀಟರ್ ದೂರದಲ್ಲಿ ಪಟ್ಟಸೋಮನಹಳ್ಳಿ ಎಂಬ ಪುರಾತನ ಗ್ರಾಮವಿದೆ. ಈ ಗ್ರಾಮದಲ್ಲಿ 20 ನೇ ಶತಮಾನದಲ್ಲಿ ಮತ್ತು 19ನೇ ಶತಮಾನದ ನಡುವೆ ಸುಮಾರು 20 ಮುಸ್ಲಿಂ ಕುಟುಂಬಗಳು ವಾಸವಾಗಿದ್ದರು. ಇವರಲ್ಲಿ ಕೆಲವರು ಒಂದನೇ ಮಹಾಯದ್ಧದಲ್ಲಿ ಭಾಗವಹಿಸಿ ನಿವೃತ್ತರಾದ ಸೈನಿಕರ ಮನೆತನಕ್ಕೆ ಸೇರಿದವರು. ನಮ್ಮ ಅಧ್ಯಯನದ ಮುಖ್ಯ ವ್ಯಕ್ತಿಯಾದ ಶ್ರೀ. ಪಿ.ಅಬ್ದುಲ್ ಸತ್ತಾರ್ ಅವರು ಇಂತಹ ಒಂದು ಕುಟುಂಬಕ್ಕೆ ಸೇರಿದವರು ಇವರ ಅಯ್ಯ, (ತಾಯಿಯ ತಂದೆಯವರು). ಒಂದನೇ ಮಹಾಯುದ್ಧದಲ್ಲಿ ಭಾಗವಹಿಸಿ. ಯುದ್ಧವು ನಿಂತಾಗ ಸರ್ಕಾರ ಕೊಟ್ಟು ನಿವೃತ್ತಿ ಹಣ ಮತ್ತು ಜಮೀನುಗಳನ್ನು ಪಡೆದು ವಸತಿಗಾಗಿ ಹುಡುಕುತ್ತ ಪಟ್ಟಸೋಮನಹಳ್ಳಿ ಗ್ರಾಮಕ್ಕೆ ಬಂದರು. ಇವರಿಗೆ ತಾಳಶಾಸನ, ಗ್ರಾಮದ ಬಳಿ ಜಮೀನನ್ನು ಸರ್ಕಾರ ನೀಡಿತ್ತು. ಇವರು ಪಟ್ಟಸೋಮನಹಳ್ಳಿ ಗ್ರಾಮದಲ್ಲಿ ಮನೆಯನ್ನು ಕೊಂಡು ಕೊಂಡು ಅಲ್ಲಿ ತಮ್ಮ ತಾಯಿಯವರೊಂದಿಗೆ ವಸತಿ ಹೂಡಿದರು. ನಂತರ ಇವರು ತೊಂಡನೂರಿನ ದರ್ಗಾದ ರಕ್ಷಕರಾಗಿದ್ದ ಸಾಲಾರ್ ಮಸೂದ್ ಕುಟುಂಬಕ್ಕೆ ಸೇರಿದ ಒಬ್ಬ ಹೆಣ್ಣು ಮಗಳನ್ನು ಮದುವೆಯಾದರು.ಇವರಿಬ್ಬರೂ ಈ ಊರಿನಲ್ಲಿ ವಾಸ್ತವ್ಯ ಹೂಡಿ. ಅಲ್ಲಿಂದಲ್ಲೇ ತಾಳಶಾಸನಕ್ಕೆ ಹೋಗಿ ಬರುತ್ತ ವ್ಯವಸಾಯವನ್ನು ಮಾಡಿಸುತ್ತಿದ್ದರು. ಇವರ ಒಬ್ಬಳೇ ಮಗಳು ಶ್ರೀಮತಿ ಖತೀಜಾ ಬೀ.

ಅ ಹೊತ್ತಿಗೆ ಇದಕ್ಕೆ ಮೊದಲೇ ಒಂದು ಇಲ್ಲಿ ನೆಲೆಸಿದ್ದ ಕೋಲಾರದ ಕಡೆಯ ರೈಲ್ವೆ ಕಂಟ್ರಾಕರ್ ಮಹಮ್ಮದ್ ಜಾಫರ್ ಸಾಹೇಬರು ಮತ್ತು ಅವರ ಮಕ್ಕಳು ಈ ಊರಿನಲ್ಲಿ ವ್ಯವಸಾಯ ವ್ಯಾಪಾರ ಮುಂತಾದ ವೃತ್ತಿಗಳನ್ನು ಹಮ್ಮಿಕೊಂಡಿದ್ದರು. ಇವರಿಗೆ ಐದು ಜನ ಗಂಡು ಮಕ್ಕಳು, ಇಬ್ಬರು ಹೆಣ್ಣು ಮಕ್ಕಳು ಇದ್ದರು. ಆ ಪೈಕಿ ಕೊನೆಯ ಮಗನೇ ಪಿ.ಮಹಮ್ಮದ್ ಗೌಸ್ ಸಾಹೇಬರು. ಇವರಿಗೆ ಮೇಲೆ ಸೂಚಿಸಿದ ಖತೀಜಾ ಬೀಯನ್ನು ತಂದು ವಿವಾಹ ಮಾಡಿಕೊಂಡರು. ಇವರು ತಮ್ಮದೇ ಆದ ಒಂದು ಸ್ವತಂತ್ರ ಸಂಸಾರವನ್ನು ಕಟ್ಟಿಕೊಂಡು ವ್ಯವಸಾಯ ಮತ್ತು ವ್ಯಾಪಾರಗಳನ್ನು ಮಾಡುತ್ತಿದ್ದರು. ಇವರು ಈ ಎರಡು ವೃತ್ತಿಗಳಲ್ಲಿ ತುಂಬಾ ಶ್ರಮಪಟ್ಟು ದುಡಿದು ತಮ್ಮದೇ ಆದ ಸ್ವಂತ ಆಸ್ತಿಗಳನ್ನು ಮಾಡಿಕೊಂಡರು. ಇವರ ಪತ್ನಿಯ ಕಡೆಯಿಂದ ಲಭಿಸಿದ ಮನೆಯಲ್ಲಿ ವಾಸಮಾಡಿಕೊಂಡು ಅಲ್ಲಿ ಅಂಗಡಿಗಳನ್ನು (ದಿನಸಿ ಮತ್ತು ಬಟ್ಟೆ) ಇಟ್ಟುಕೊಂಡರು ಇವರಿಗೆ ಬಹಳ ವರ್ಷ ಮಕ್ಕಳಾಗಲಿಲ್ಲ.ಮದುವೆಯಾದ ಹತ್ತು ವರ್ಷಗಳ ನಂತರ ಒಂದು ಗಂಡು ಮಗು ಆಯಿತು. ಅವರೇ ನಮ್ಮ ಈ ಅಧ್ಯಯನದ ನಾಯಕರಾದ ಶ್ರೀ ಪಿ.ಅಬ್ದುಲ್ ಸತ್ತಾರ್ ಅವರು. ಇವರು ಪಟ್ಟಸೋಮನಹಳ್ಳಿಯಲ್ಲಿ 1929ನೇ ಇಸವಿ ಫೆಬ್ರವರಿ 10

ನೇ ತಾರೀಖು ಜನಿಸಿದರು. ಈ ಕುಟುಂಬ ರೈತರ ಮಧ್ಯ ವಾಸಿಸುತ್ತ ಅವರ ನಡೆ-ನುಡಿ ಪದ್ಧತಿಗಳು ಮತ್ತು ಭಾಷೆಯನ್ನು ತಮ್ಮದಾಗಿಸಿಕೊಂಡರು. ಅಬ್ದುಲ್ ಸತ್ತಾರ್ ಅವರ ತಂದೆ ಕೂಲಿ ಮಠದಲ್ಲಿ ಕನ್ನಡ ಕಲಿತವರು ಅವರ ತಾಯಿ ಒಂದು ಕಡೆ, ತಂದೆ ಮತ್ತು ಅಜ್ಜಿಯಿಂದ ಪರ್ಷಿಯನ್ ಭಾಷೆ, ಪತಿ ಮತ್ತು ಅವರ ಕಡೆಯಿಂದ ಕನ್ನಡ ಭಾಷೆಯನ್ನು ಕಲಿತು ನಿರರ್ಗಗಳವಾಗಿ ಕನ್ನಡ ಮಾತನಾಡುವಷ್ಟು ಪ್ರಾವಿಣ್ಯತೆ ಪಡೆದಿದ್ದರು.

ಇವರ ಮಗನಾಗಿ ಹುಟ್ಟಿದ ಅಬ್ದುಲ್ ಸತ್ತಾರ್ ರೈತ ಮಕ್ಕಳ ಒಡನಾಟದಿಂದ ತಾನು ಕೂಡ ಕನ್ನಡ ಭಾಷೆಯಲ್ಲಿ ಚೆನ್ನಾಗಿ ಮಾತನಾಡುವುದನ್ನು ಕಲಿತರು. ಆ ಊರಿನಲ್ಲಿ ಇದ್ದ ಒಂದು ಹಳೆಯ ಪ್ರೈಮರಿ ಶಾಲೆಯ ವಿದ್ಯಾರ್ಥಿ. ಈ ಶಾಲೆಯು ಆ ಊರಿನ ಪೂರ್ವ ಭಾಗದಲ್ಲಿರುವ ಶ್ರೀ ಆಂಜನೇಯ ಸ್ವಾಮಿ ದೇವಸ್ಥಾನದ ಒಳಭಾಗದ ದಕ್ಷಿಣ ದಿಕ್ಕಿನಲ್ಲಿರುವ ಒಸಾರೆಯಲ್ಲಿ ನಡೆಯುತಿತ್ತು, ಇದು ಆ ಪ್ರದೇಶಕ್ಕೆ ಕಲಿಕೆಯ ಒಂದು ಕೇಂದ್ರವೇ ಆಗಿ ಈ ಶಾಲೆಗೆ ಬ್ಯಾಡರಹಳ್ಳಿ, ತಿರುಮಲಪುರ, ಕನಗನಮರಡಿ, ತಾಳಶಾಸನ,ಯಮಕಾರಕೊಪ್ಪಲು, ಚಿಕ್ಕಾಡೆ, ಚಿಕ್ಕಮರಳಿ, ಹಿರೀಮರಳಿ, ಗ್ರಾಮಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರು. ಈ ಶಾಲೆಯಲ್ಲಿ ಪ್ರೈಮರಿ ಒಂದರಿಂದ ನಾಲ್ಕನೇ ತರಗತಿಯವರೆಗೆ ಅಬ್ದುಲ್ ಸತ್ತಾರ್ ವಿದ್ಯಾಭ್ಯಾಸ ಮಾಡಿದರು, ಮುಂದಕ್ಕೆ ಹಿರೋಡೆಯ ಮಾಧ್ಯಮಿಕ ಶಾಲೆಗೆ ಹೋಗಬೇಕಾಯಿತು, ಆಗ ಪಟ್ಟಸೋಮನಹಳ್ಳಿಯಿಂದ ಮೂರು ಮೈಲಿ ದೂರ ನಡೆದುಕೊಂಡು ಹೋಗುವ ಪರಿಸ್ಥಿತಿ ಇದ್ದಿತು. ಅಬ್ದುಲ್ ಸತ್ತಾರ್ ಅವರು ಈ ಚಿಕ್ಕ ವಯಸ್ಸಿನಲ್ಲಿ ಈ ದೂರದ ಪ್ರಯಾಣವನ್ನು ಮಾಡಬೇಕಾಯಿತು, ಈ ರೀತಿ ಹೋಗುವಾಗ ಮಳೆಗಾಲದಲ್ಲಿ ಬಹಳ ತೊಂದರೆಯಾಗುತ್ತಿತ್ತು, ಈ ಊರಿನಿಂದ ಮಾಧ್ಯಮಿಕ ಶಾಲೆಗೆ ಹೋಗುತ್ತಿದ ವಿದ್ಯಾರ್ಥಿ ಇವರು ಒಬ್ಬರೇ. ಇವರ ಜೊತೆಗೆ ಚಿಕ್ಕಾಡೆಯಿಂದ ಐದು ಜನ ಚಿಕ್ಕಮರಳಿಯಿಂದ ಒಬ್ಬರು ದೇವೇಗೌಡನಕೊಪ್ಪಲುನಿಂದ ಒಬ್ಬರು ಜೊತೆ ಸೇರುತ್ತಿದ್ದರು. ಇಲ್ಲಿಂದ ಇವರು ಎಲ್ಲ ಮಾಧ್ಯಮಿಕ ಶಾಲೆಗೆ ಹೋಗಿ ತಮ್ಮ ತರಗತಿಗಳನ್ನು ಮುಗಿಸಿಕೊಂಡು ಸಾಯಂಕಾಲ 5 ಗಂಟೆಗೆ ಹಿಂತಿರುಗುತ್ತಿದರು. ಸಮಾನ್ಯವಾಗಿ ಹಿರೋಡೆಯಲ್ಲಿ ಗುರುವಾರ ಸಂತೆ ಆಗುತ್ತಿದ್ದರಿಂದ ಸಂತೆಗೆ ಹೋಗುತ್ತಿದ್ದ ಗಾಡಿಗಳು ಇವರಿಗೆ ಕೆಲವು ಸಲ ಕುಳಿತುಕೊಳ್ಳಲು ಅವಕಾಶ ಕೊಡುತ್ತಿದ್ದರು. ಕೆಲವು ಸಲ ಪೇಟೆಗೆ ಹೋಗುತ್ತಿದ್ದ ಹಿರಿಯ ವ್ಯಕ್ತಿಗಳು ತಾವು ಹಿಡಿದಿರುತ್ತಿದ್ದ ಕೊಡೆಗಳಲ್ಲಿ ಈ ವಿದ್ಯಾರ್ಥಿಗಳಿಗೆ ಸೇರಿಸಿಕೊಳ್ಳುತ್ತಿದ್ದು ಸಹಾಯ ಮಾಡುತ್ತಿದ್ದರು. ಒಮ್ಮೊಮ್ಮೇ ಆ ಕಾಲದಲ್ಲಿ ಜೂನ್- ಜುಲೈ ತಿಂಗಳಲ್ಲಿ ಮುಂಗಾರು ಮಳೆಯ ಆರ್ಭಟ ಬಹಳ ಜೋರಾಗಿರುತ್ತಿತ್ತು. ಹಲವು ಸಲ ಈ ವಿದ್ಯಾರ್ಥಿಗಳು ಮಳೆಯಲ್ಲಿ ನೆನೆಯಬೇಕಾದ ಪರಿಸ್ಥಿತಿ ಆಗುತ್ತಿತ್ತು. ಅಂತಹ ಸಂದರ್ಭದಲ್ಲಿ ಒಂಟಿಯಾಗಿ ಉಳಿಯುತ್ತಿದ್ದ ಅಬ್ದುಲ್ ಸತ್ತಾರ್ ಚಿಕ್ಕಾಡೆಯಲ್ಲಿ ತಮಗೆ ಪರಿಚಿತರಾಗಿದ ನಿರಂತರವಾಗಿ ವಿದ್ಯಾರ್ಥಿಗಳ ಮತ್ತು ಇತರರ ಮನೆಯಲ್ಲಿ ಆಶ್ರಯ ಪಡೆಯಬೇಕಾಗುತ್ತಿತ್ತು, ಇದರಿಂದ ಕಾಯಿಲೆಗೆ ತುತ್ತಾಗುತ್ತಿದ್ದರು, ಇದನ್ನು ಗಮನಿಸಿ

ಇವರ ತಂದೆ ಹಿರೋಡೆಯಲ್ಲಿ ಒಂದು ಮನೆಯನ್ನು ಖರೀದಿ ಮಾಡಿ ಅಲ್ಲಿಗೆ ಸಂಸಾರವನ್ನು ಸ್ಥಳಾಂತರಿಸಬೇಕೆಂದು ಯೋಚನೆ ಮಾಡಿದರು. ಈ ಉದ್ದೇಶದಿಂದ ಮನೆಯನ್ನು ಖರೀದಿಸಿ ಅದರ ದುರಸ್ತಿ ಕಾರ್ಯವನ್ನು ಕೈಗೊಂಡರು. ಇದನ್ನು ತಿಳಿದು ಇವರ ದಾಯಾದಿಗಳು ಮತ್ತು ಇತರರು ಇವರ ತಂದೆ ಇಲ್ಲದ ಸಮಯದಲ್ಲಿ ಅಂಗಡಿಗೆ ನುಗ್ಗಿ ಕೈಸಿಕ್ಕಿದ ವಸ್ತುಗಳನ್ನು ದೋಚಿದರು. ಇದರಲ್ಲಿ ನಷ್ಟವಾದರೂ ಸಹಿಸಿಕೊಂಡು ಮನೆ ಬದಲಾಯಿಸುವ ಕೆಲಸ ಪೂರ್ಣ ಮಾಡಿದರು ಇವರ ತಂದೆ.

ಹಿರೋಡೆಯ ಮಾಧ್ಯಮಿಕ ಶಾಲೆಗೆ ಇವರನ್ನು ಸೇರಿಸಿದರು. ಆಗ ಮಾಧ್ಯಮಿಕ ಶಾಲೆಯು ಈಗಿನ ನಾಗಮಂಗಲ ರಸ್ತೆಯಲ್ಲಿರುವ ಉರ್ದುಶಾಲೆಯ ಕಟ್ಟಡದಲ್ಲಿ ನಡೆಯುತ್ತಿತ್ತು. ಆದರ ಮುಖ್ಯೋಪಾಧ್ಯಾರು ಚೆನ್ನಲಿಂಗಯ್ಯನವರು. ಆ ಕಾಲದಲ್ಲಿ ಅ ಶಾಲೆಯಲ್ಲಿ ಒಳ್ಳೆಯ ಉಪಾಧ್ಯಾಯರು ಇದ್ದರು. ಚೆನ್ನಲಿಂಗಯ್ಯನವರು ಬಹಳ ಶ್ರೇಷ್ಠ ದರ್ಜೆಯ ಉಪಾಧ್ಯಾಯರು. ಇವರು ಕರ್ನಾಟಕ ಒಕ್ಕಲಿಗ ಸಂಘದ ಮಾಜಿ ಅಧ್ಯಕ್ಷರಾಗಿದ ಡಾ|| ಶ್ರೀ ವಿಠಲ್‌ರವರ ತಂದೆಯವರು. ಇವರಿಗೆ ವಿದ್ಯಾರ್ಥಿಗಳ ಪ್ರಗತಿಯಲ್ಲಿ ಬಹಳ ಆಸೆ. ಇವರು ಇಂಗ್ಲೀಷ್ ಮತ್ತು ಗಣಿತಗಳನ್ನು ಕೆಲವು ತರಗತಿಗಳಿಗೆ ಭೋಧಿಸುತ್ತಿದ್ದರು. ಆ ಕಾಲದಲ್ಲಿ ಕಾಪಿ ಪುಸ್ತಕಗಳು ಬಂದಿರಲಿಲ್ಲ ಆದ್ದರಿಂದ ಬೋರ್ಡಿನ ಮೇಲೆ ನಾಲ್ಕು ಸಾಲು ಗೆರೆಗಳನ್ನು ಎಳೆದು ಅವುಗಳಲ್ಲಿ ಇಂಗ್ಲೀಷ್ ಅಕ್ಷರಗಳನ್ನು ಬರೆದು ವಿದ್ಯಾರ್ಥಿಗಳು ಹಾಗೆ ಮಾಡುವಂತೆ ಹೇಳಿ ಮಾಡಿಸುತ್ತಿದ್ದರು. ಇವರ ಈ ಕ್ರಮ ಅನೇಕ ವಿದ್ಯಾರ್ಥಿಗಳಿಗೆ ಸುಂದರವಾಗಿ ಇಂಗ್ಲೀಷ್‌ನ್ನು ಬರೆಯಲು ಕಾರಣವಾಯಿತು. ಇಂಗ್ಲೀಷ್‌ನಲ್ಲಿದ ನಾಲ್ಕು ಬಗೆಯ ಅಕ್ಷರಗಳನ್ನು ತೋರಿಸಿ ಅವುಗಳನ್ನು ಕಾಪಿ ಮಾಡಿಸಿ, ತಿದ್ದಿ, ಬರೆಸುತ್ತಿದ್ದರು. ಹೀಗೆ ಈ ಶಾಲೆಯಲ್ಲಿ ಇದ್ದ ಇನ್ನೊಬ್ಬ ಉಪಾಧ್ಯಾಯರೆಂದರೆ "ವೆಂಕಟನಾರಾಯಣ ಐಯ್ಯಂಗಾರ್" ಎಂಬ ಕನ್ನಡ ಉಪಾಧ್ಯಾಯರು ಸ್ವಯಂ ಸಂಗೀತ ಕಲಿತಿದ್ದ ವಿದ್ವಾಂಸರು ಆಗಿದ್ದರು. ಶಾಲೆಯ ಬಿಡುವಿನ ವೇಳೆಯಲ್ಲಿ ಕೆಲವು ವಿದ್ಯಾರ್ಥಿಗಳಿಗೆ ಸಂಗೀತದ ಪಾಠವನ್ನು ಮಾಡುತ್ತಾ ಸಂಗೀತದ ಅಭ್ಯಾಸವನ್ನು ನಡೆಸುತ್ತಿದ್ದರು. ಹೀಗೆ ಇವರಲ್ಲಿ ಸಂಗೀತದ ಪಾಠಕ್ಕೆ ಸೇರಿದ ವಿದ್ಯಾರ್ಥಿಗಳಲ್ಲಿ ಹಳೇಬೀಡಿನ ಯೋಗನರಸಿಂಹ ಒಬ್ಬರು. ಇವರ ತಂದೆ ಯೋಗನರಸಿಂಹನನ್ನು ಕರೆತಂದು ಉಪಾಧ್ಯಾಯರ ಮನೆಯಲ್ಲೇ ಬಿಟ್ಟಿದ್ದರು. ಯೋಗನರಸಿಂಹ ಆ ಮನೆಯಲ್ಲಿ ಇದ್ದು ಅವರ ಸೇವೆ ಮಾಡುತ್ತ ಸಂಗೀತ ಕಲಿತರು ಮುಂದೆ ಆತ ನಾಟಕ, ಚಲನಚಿತ್ರ, ಕ್ಷೇತ್ರದಲ್ಲಿ ಪ್ರಸಿದ್ಧನಾದ ಈ ಅವಧಿಯಲ್ಲಿ ಅಬ್ದುಲ್ ಸತ್ತಾರ್ ಅವರ ಸಹಪಾಠಿಗಳಾಗಿದ್ದ ಅನೇಕರು ಮುಂದೆ ಖ್ಯಾತನಾಮರಾದರು. ಅವರ ಪೈಕಿ ಎಸ್.ಡಿ. ದೊಡ್ಡಕಾಳೇಗೌಡ, ಎಸ್.ಟಿ.ನಾಗರಾಜ, ಹೆಚ್.ನಂಜೇಗೌಡ, ಕೆ.ಎಸ್.ಸಿಂಗ್ರೀಗೌಡ, ಬಿ.ನರಸಿಂಹ್ಮೇಗೌಡ, ಹೆಚ್.ನಂಜೇಗೌಡ, ಪಿ.ಮರೀಗೌಡ, ಮುಂತಾದವರು. ಇವರ ಸಹಪಾಠಿಗಳಾಗಿದ್ದರು. ಭಾರತದ ಉಚ್ಚ ನ್ಯಾಯಾಲಯದ ಉಚ್ಛ ನ್ಯಾಯಾಮೂರ್ತಿಗಳಾಗಿ

ನಿವೃತ್ತರಾದ ಇ.ಎಸ್.ವೆಂಕಟರಾಮಯ್ಯನವರು ಇವರಿಗಿಂತ ಮೂರು ವರ್ಷ ಹಿರಿಯರು ಮತ್ತು ಇದೇ ಶಾಲೆಯ ವಿದ್ಯಾರ್ಥಿ, ಹೀಗೆ ಅಬ್ದುಲ್‌ಸತ್ತಾರ್ ಅವರು 1939ರಿಂದ 1943ರವರೆಗೆ ನಾಲ್ಕು ವರ್ಷ ಮಿಡಲ್ ಸ್ಕೂಲ್‌ನಲ್ಲಿ ವಿದ್ಯಾಭ್ಯಾಸ ಮಾಡಿ ಎಲ್‌ಎಸ್ ಪರೀಕ್ಷೆಯನ್ನು ಪಾಸ್ ಮಾಡಿ (ಆಗ ಎಲ್‌ಎಸ್ ಪರೀಕ್ಷೆಯು ಶ್ರೀರಂಗಪಟ್ಟಣ ಕೇಂದ್ರದಲ್ಲಿ ನಡೆಯುತ್ತಿತ್ತು)ಎಲ್ ಎಸ್ ಮುಗಿಸಿದ ಮೇಲೆ ಮುಂದಿನ ವಿದ್ಯಾಭ್ಯಾಸಕ್ಕಾಗಿ ಮೈಸೂರಿನ ಸರ್ಕಾರಿ ಮರಿಮಲ್ಲಪ್ಪ ಶಾಲೆಗೆ ಸೇರಿಸಿದರು. ಪ್ರೌಢಶಾಲೆಯಲ್ಲಿ ಇವರು ಗಣಿತ ಮತ್ತು ವಿಜ್ಞಾನಗಳನ್ನು ಐಚ್ಚಿಕ ವಿಷಯಗಳಾಗಿ ಅರಿಸಿಕೊಂಡರು. ಹಿರೋಡೆಯಿಂದ ಪ್ರತಿದಿನ ಸೈಕಲ್‌ನ ಮೇಲೆ ಹಿರೋಡೆ ರೈಲ್ವೆ ನಿಲ್ದಾಣಕ್ಕೆ ಹೋಗಿ ಸೈಕಲ್‌ಗಳನ್ನು ಅಲ್ಲೇ ಇದ್ದ ಒಂದು ಭತ್ತದ ಗಿರಣಿಯಲ್ಲಿ ಇರಿಸಿ ಅಲ್ಲಿಯಿಂದ ರೈಲಿನಲ್ಲಿ ಮೈಸೂರಿಗೆ ಹೋಗುತ್ತಿದ್ದರು ಆಗ ಹಿರೋಡೆಯಿಂದ ಸುಮಾರು ಹತ್ತು-ಹನ್ನೆರಡು ಜನ ವಿಧ್ಯಾರ್ಥಿಗಳು ಪ್ರಯಾಣ ಮಾಡುತ್ತಿದ್ದರು. ಇವರಲ್ಲಿ ಬಹುತೇಕರು ಬ್ರಾಹ್ಮಣ ಕೋಮಿಗೆ ಸೇರಿದವರಾಗಿದ್ದರು. ಹಿರೋಡೆ ಒಂದು ಉಪವಿಭಾಗವಾದರಿಂದ ಇಲ್ಲಿದ್ದ ಅನೇಕ ಸರ್ಕಾರಿ ಅಧಿಕಾರಿಗಳ ಮಕ್ಕಳು ಕೂಡ ಈ ವಿಧ್ಯಾರ್ಥಿಗಳ ಗುಂಪಿನಲ್ಲಿ ಇರುತ್ತಿದ್ದರು. ಇವರೆಲ್ಲ ಮೈಸೂರಿಗೆ ಹೋಗಿ ಅಲ್ಲಿದ್ದ ಮಹಾರಾಜ ಹೈ ಸ್ಕೂಲ್, ಶಾರಧ ವಿಲಾಸ ಹೈಸ್ಕೂಲ್, ಹಾರ್ಡ್‌ವಿಕ್ ಹೈಸ್ಕೂಲ್, ಬನುಮಯ್ಯ ಹೈಸ್ಕೂಲ್, ಮರಿಮಲ್ಲಪ್ಪ ಹೈಸ್ಕೂಲ್ ಎಂಬ ಪ್ರೌಢ ಶಾಲೆಗಳಿಗೆ ಹೋಗುತ್ತಿದ್ದರು. (ಇತ್ತೀಚೆಗೆ ಫಿಲೋಮಿನಾ ಮತ್ತು ದಳವಾಯಿ ಶಾಲೆಗಳು ಆಗಿವೆ.) ಇಲ್ಲಿ ಇವರಿಗೆ ಒಳ್ಳೆಯ ಉಪಾಧ್ಯಾಯರ ಮಾರ್ಗದರ್ಶನ ದೊರೆಯಿತು. ಆ ಪೈಕಿ ಸಿ.ಡಿ. ಗೋವಿಂದರಾವ್ ಎಂ.ವಿ. ಜಂಬುನಾಥಂ,ಟಿ.ಆರ್. ಪರಮೇಶ್ವರನ್, ಮತ್ತು ಕೃಷ್ಣಮಾಚಾರ್, ಎಂಬ ಶ್ರೇಷ್ಠ ಉಪಾಧ್ಯಾಯರು ದೊರೆತಿದ್ದರು. ಅಬ್ದುಲ್ ಸತ್ತಾರ್ ಅವರಿಗೆ ಮಾಧ್ಯಮಿಕ ಶಾಲೆಯಿಂದ ಪಠ್ಯ ಪುಸ್ತಕಗಳ ಜೊತೆಗೆ ಇತರೇ ಪುಸ್ತಕಗಳನ್ನು ಓದುವ ಹವ್ಯಾಸವಿತ್ತು, ಇದಕ್ಕೆ ಕಾರಣ ಮಾಧ್ಯಮಿಕ ಶಾಲೆಯ ಮುಖ್ಯೋಪಧ್ಯಾಯರಾಗಿದ್ದ ಚನ್ನ ಲಿಂಗಯ್ಯನವರು. ಅವರು ಆ ಕಾಲಕ್ಕೆ ಪ್ರಸಿದ್ಧರಾಗಿದ್ದ ಅನೇಕ ಪುಸ್ತಕಗಳನ್ನು ಕೊಂಡು ತಂದು ಗ್ರಂಥಭಂಡಾರದಲ್ಲಿ ಸೇರಿಸಿದ್ದರು. ಮತ್ತು ಪ್ರತಿ ಶುಕ್ರವಾರ ಕೊನೆಯ ಪಿರಿಯಡ್. ಲೈಬ್ರರಿ ಪಿರಿಯಡ್ ಎಂದೇ ಮಾಡಿ. ಅ ಪಿರಿಯಡ್‌ಗೆ ಯಾವುದಾದರು ಪುಸ್ತಕವನ್ನು ತಂದು ಓದುತ್ತಿದ್ದರು. ಮತ್ತು ವಿದ್ಯಾರ್ಥಿಗಳಿಗೆ ಓದುವಂತೆ ಹೇಳುತ್ತಿದ್ದರು ಈ ಬಗೆಯ ಮಾತುಗಳಿಂದ ಪ್ರಭಾವಿತರಾದ ಅಬ್ದುಲ್ ಸತ್ತಾರ್ ಈ ಬಗೆಯ ಪಠ್ಯೇತರ ಪುಸ್ತಕಗಳನ್ನು ಓದುವ ಹವ್ಯಾಸ ಬೆಳಸಿಕೊಂಡರು ಇದು ಪ್ರತಿ ವರ್ಷ ಹೆಚ್ಚುತ್ತ ಹೋಗಿ ಇವರು ಮೈಸೂರಿನಲ್ಲಿ ಪ್ರೌಢಶಾಲೆ ವಿದ್ಯಾರ್ಥಿಯಾದಾಗ ಹೆಚ್ಚಾಗಿ ಬೆಳೆದು ಕನ್ನಡದ ಜೊತೆಗೆ ಇಂಗ್ಲೀಷ್ ಪುಸ್ತಕಗಳನ್ನು ಓದಲು ಪ್ರಾರಂಭಿಸಿದರು. ಇವರ ಅ ಕಾಲದ ಓದಿಗೆ ಪ್ರೋತ್ಸಾಹ ಕೊಟ್ಟವರು ಇವರ ರಸಾಯನಶಾಸ್ತ್ರದ ಉಪಾಧ್ಯಾಯರಾಗಿದ್ದ ಶ್ರೀ ಕೃಷ್ಣಮಾಚಾರ್‌ರವರು ಅ ಕಾಲದಲ್ಲಿ ಸತ್ತಾರ್ ಅವರು ಕೈಗೆ ಸಿಕ್ಕಿದ ಎಲ್ಲಾ ಬಗೆಯ ಸಾಹಿತ್ಯವನ್ನು ಓದಿಕೊಂಡರು. ಹೆಚ್ಚಾಗಿ

ಪತ್ತೆದಾರಿಕತೆ, ಕಾದಂಬರಿಗಳನ್ನು ಓದುತ್ತಿದ್ದರು ಇವರ ಈ ಆಸಕ್ತಿಗೆ ಪೋಷಕವಾಗಿ ನಿಂತವರು ಇವರ ಸಹಪಾಠಿ ಮತ್ತು ಅಪ್ತಮಿತ್ರ ಎಸ್. ಗೋಪಾಲಸ್ವಾಮಿ ಎಂಬ ಸಹ ವಿದ್ಯಾರ್ಥಿ ಕತೆ, ಕಾದಂಬರಿಗಳಲ್ಲದೆ ಬೇರೆ ಗಂಭೀರ ವಿಷಯಗಳ ಓದುವಿಕೆಯಲ್ಲಿ ಇವರಿಗೆ ಬೆಂಬಲ ಕೊಟ್ಟವರು ಇವರ ಇನ್ನೊಬ್ಬ ಸಹಪಾಠಿ ಎನ್. ಸಿ ಲಕ್ಷಣಚಾರ್ಲು (ಇವರ ತಂದೆ ಮೆಡಿಕಲ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದರು) ಹೀಗೆ 1946 ರ ತನಕ ಪ್ರೌಢಶಾಲೆಯಲ್ಲಿ ವಿಧ್ಯಾಭ್ಯಾಸ ಮಾಡಿ 46ರಲ್ಲಿ ಎಸ್.ಎಸ್.ಎಲ್.ಸಿ ಪರಿಕ್ಷೆಯಲ್ಲಿ ಉತ್ತೀರ್ಣರಾದರು.

ಮುಂದಕ್ಕೆ ಇವರನ್ನು ಮೈಸೂರಿನ ಇಂಟರ್ ಮಿಡಿಯೆಟ್ ಕಾಲೇಜಿಗೆ ಸೇರಿಸಲಾಯಿತು, ಇಲ್ಲೂ ಕೂಡ ಒಳ್ಳೆಯ ಶಿಕ್ಷಕರ ಮಾರ್ಗದರ್ಶನ ಪಡೆದರು, ಅ ಪೈಕಿ ಇಂಗ್ಲೀಷಿನಲ್ಲಿ ಮೈಲಾರಿರಾಯರು, ಕನ್ನಡದಲ್ಲಿ ಅನಂತರಂಗಚಾರ್, ತ.ಸು.ಶಾಮರಾವ್ ಮುಂತಾದವರು ಪ್ರಮುಖರು. ಅ ಕಾಲದಲ್ಲಿ ದೇಶದ ಎಲ್ಲಾ ಕಡೆ ಸ್ವತಂತ್ರ ಚಳುವಳಿ ರೂಪುಗೊಳ್ಳುತ್ತಿತ್ತು. ವಿದ್ಯಾರ್ಥಿಗಳೆಲ್ಲ ಈ ಚಳುವವಳಿಯಲ್ಲಿ ಭಾಗವಹಿಸಿದ್ದರು. ಅವರ ಓದುವ ಅಸಕ್ತಿ ಅರ್ಧ-ಅರ್ಧಕ್ಕೆ ಕಡಿಮೆಯಾಯಿತು. ಸತ್ತಾರ್ ಅವರು ಕೂಡ ಈ ಚಳುವಳಿಗೆ ಇಳಿದರು. ಆಗ ಮೈಸೂರು ರಾಜಧಾನಿ ಅಗಿದುದರಿಂದ ಈ ಬಗೆಯ ಸ್ವತಂತ್ರ ಚಳುವಳಿಗಳು ಮೈಸೂರಿನಲ್ಲೇ ನಡೆಯುತ್ತಿದ್ದವು, ಈ ಚಳುವಳಿಗಳಲ್ಲಿ ವಿದ್ಯಾರ್ಥಿಗಳ ಪಾತ್ರ ಬಹಳ ದೊಡ್ಡದಾಗಿತ್ತು. ಓದನ್ನು ಕಡೆಗಣಿಸಿ ಚಳುವಳಿಗೆ ಇಳಿದರು, ಮೈಸೂರಿನಲ್ಲಿ ಎಲ್ಲೇ ಸಭೆಗಳಾಗಲಿ, ಪ್ರತಿಭಟನೆಗಳಾಗಲಿ ಆದರೆ ಅಲ್ಲಿ ವಿದ್ಯಾರ್ಥಿಗಳು ಇರುತ್ತಿದ್ದರು, ಅ ಕಾಲಕ್ಕೆ ಮೈಸೂರಿನಲ್ಲಿ ಕಾಂಗ್ರೇಸ್ ಮುಖಂಡರಾದ ಎಂ, ಎನ್. ಜೋಯಿಸ್, ಹೆಚ್.ಸಿ.ದಾಸಪ್ಪ, ಕೆ.ಸಿ.ರೆಡ್ಡಿ, ತಗಡೂರು ರಾಮಚಂದ್ರರಾವ್ ಮುಂತಾದವರು ಅವರ ಭಾಷಣಗಳಿಂದ ಆಕರ್ಷಿತರಾದರು. ಇದೇ ರೀತಿ ಬೆಂಗಳೂರಿನಿಂದ ಕೆ.ಟಿ.ಭಾಷಂ ಎಸ್.ವಿ. ರಾಮರಾವ್ ಮುಂತಾದವರು ಈ ಚಳುವಳಿಗೆ ಬರುತ್ತಿದ್ದರು. ವಿದ್ಯಾರ್ಥಿಗಳು ಪಿಕೆಟನ್‌ಗಳಲ್ಲಿ ಭಾಗವಹಿಸುತ್ತಿದ್ದರು. ಎಲ್ಲಾ ಶಾಲೆಗಳಿಂದ ವಿದ್ಯಾರ್ಥಿಗಳನ್ನು ಹೊರಡಿಸಿಕೊಂಡು ಸಭೆ, ಸಮಾರಂಭಗಳಲ್ಲಿ ಭಾಗವಹಿಸುತ್ತಿದ್ದರು. ಇದನ್ನು ತಡೆಗಟ್ಟಲು ಪೊಲೀಸರು ಪ್ರಯತ್ನಿಸುತ್ತಿದ್ದರು. ಕೆಲವು ಸಲ ಲಾಠಿ ಚಾರ್ಜ್ ಆಗುತ್ತಿತ್ತು. ಆಗ ಮೈಸೂರಿನಲ್ಲಿ ಜಯಚಾಮರಾಜ ಒಡೆಯರ್ ರಾಜರಾಗಿದ್ದರು. ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ದಿವಾನರಾಗಿದ್ದರು, ಭಾರತ ಗೌವರ್ನರ್ ಜನರಲ್ ಆಗಿ ಲಾರ್ಡ್‌ವೆಂವಲ್ ಎಂಬುವವರಿದ್ದರು. ಈ ಚಳುವಳಿಗಳಿಂದ ಒಂದು ಕಡೆ ಸಮಾಜ ಜೀವನ ಮತ್ತೊಂದು ಕಡೆ ಸರ್ಕಾರ ದಿಕ್ಕು ತಪ್ಪಿತ್ತು. ಈ ಎಲ್ಲಾ ಚಳುವಳಿಗಳಲ್ಲಿ ಸತ್ತಾರ್ ಅವರು ಸಕ್ರಿಯವಾಗಿ ಪಾತ್ರವಹಿಸಿ ಕೆಲವು ಸಲ ಪೋಲೀಸರಿಂದ ಲಾಠಿ ಚಾರ್ಜ್‌ಗೂ ಗುರಿಯಾದರು. ಭಾರತಕ್ಕೆ 1947 ಆಗಸ್ಟ್ 15 ಸ್ವತಂತ್ರ ಬಂದರು, ಮೈಸೂರಿಗೆ ಬರಲಿಲ್ಲ, ಜವಾಬ್ದಾರಿ ಸರ್ಕಾರವೇ ಸ್ಥಾಪನೆ ಆಗಲಿಲ್ಲ ಚಳುವಳಿ ಮುಂದುವರೆಯಿತು. ಈ ನಡುವೆ ಭಾರತದ ಮೊದಲಿನ ಸ್ವತಂತ್ರ ಗೌವರ್ನರ್ ಜನರಲ್ ಆಗಿದ್ದ

ಚಕ್ರವತಿ ರಾಜಗೋಪಾಲಚಾರಿಯವರು ಮೈಸೂರಿಗೆ ಭೇಟಿಕೊಟ್ಟು ರಾಜರ ಮನಸ್ಸನ್ನು ಒಲಿಸಿದ್ದರು. ಮೈಸೂರು ಕೂಡ ಭಾರತ ಒಕ್ಕೂಟದಲ್ಲಿ ಸೇರಿಕೊಳ್ಳಲು ಒಪ್ಪಿಗೆ ನೀಡಿತ್ತು. ಆಗ ಕೆ.ಸಿ.ರೆಡ್ಡಿಯವರ ನೇತೃತ್ವದಲ್ಲಿ ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರ ರಚನೆಯಾಯಿತು. ರೆಡ್ಡಿಯವರು ಮುಖ್ಯಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದ್ದರು. ಮಹಾರಾಜ ಎಂಬ ಸ್ಥಾನವನ್ನು ತೆಗೆದು ಹಾಕಿ ಅದಕ್ಕೆ ಪ್ರತಿಯಾಗಿ ರಾಜ ಪ್ರಮುಖ ಸ್ಥಾನ ನಿರ್ಮಿಸಿದರು. ಜಯಚಾಮರಾಜ ಒಡೆಯರ್ ರಾಜಪ್ರಮುಖ ಆದರೂ. ಈ ನಡುವೆ ವಿದ್ಯಾರ್ಥಿಗಳೆಲ್ಲಾ ರಾಜಕೀಯದಲ್ಲಿ ಭಾಗವಹಿಸಿದ್ದರಿಂದ ಅವರ ವಿದ್ಯಾಭ್ಯಾಸ ಸರಿಯಾಗಿ ನಡೆದಿರಲಿಲ್ಲ, ವಿದ್ಯಾರ್ಥಿಗಳು ಒಂದು ಸಂಘಟನೆ ಮಾಡಿಕೊಂಡು ತಮಗೆ ಪರೀಕ್ಷೆ ಇಲ್ಲದೆ ಪಾಸ್ ಮಾಡಬೇಕೆಂಬ ಒಂದು ಕೋರಿಕೆಯನ್ನು ಮುಖ್ಯಮಂತ್ರಿ ಕೆ.ಸಿ.ರೆಡ್ಡಿಯವರಿಗೆ ಸಲ್ಲಿಸಿದರು. ಆ ನಿಯೋಗದಲ್ಲಿ ಅಬ್ದುಲ್ ಸತ್ತಾರ್ ಅವರೂ ಕೂಡ ಇದ್ದರು. ಇವರ ಮನವಿಗೆ ಉತ್ತರಿಸುತ್ತ ರೆಡ್ಡಿಯವರು ಹೀಗೆಂದು ಹೇಳಿದ್ದರು. ನಮ್ಮ ಚಳುವಳಿಯಲ್ಲಿ ನೀವು ವಹಿಸಿದ ಪಾತ್ರ ಬಹಳ ಮುಖ್ಯವಾದುದ್ದು. ಈ ಸಹಾಯ ಸಹಕಾರಗಳು ಇಲ್ಲದೇ ಹೋಗಿದ್ದರೇ ಈ ಚಳುವಳಿಯಲ್ಲಿ ಯಶಸ್ಸು ಪಡೆಯುವುದು ಕಷ್ಟವಾಗುತ್ತಿತ್ತು. ನೀವು ಮಾಡಿದ ತ್ಯಾಗ ನನಗೆ ಗೊತ್ತಿದೆ. ಆದರೆ ನಾವು ನಿಮಗೆ ಪರೀಕ್ಷೆಯಿಲ್ಲದೆ ಪಾಸ್ ಮಾಡಿಸಿದರೆ ಉಳಿದ ವಿದ್ಯಾರ್ಥಿಗಳ ಟೀಕೆಗೆ ಒಳಗಾಗುತ್ತೇವೆ, ನಿಮಗೂ ಕೆಟ್ಟ ಹೆಸರು ಬರುತ್ತದೆ, ಆದುದ್ದರಿಂದ ನಾನು ಎಷ್ಟು ಪಾಠ ಆಗಿದೆಯೋ ಅಷ್ಟರಲ್ಲೆ ಪರೀಕ್ಷೆ ಮಾಡಬೇಕೆಂದು ಮತ್ತು ಮೌಲ್ಯಮಾಪನ ಮಾಡುವಾಗ ಪ್ರತಿ ವಿದ್ಯಾರ್ಥಿಗೂ ಹತ್ತು ಅಂಕಗಳನ್ನು ಸೇರಿಸಬೇಕೆಂದು ಆರ್ಡರ್ ಮಾಡುತ್ತೇನೆ ಮತ್ತು ಪರೀಕ್ಷೆಯನ್ನು ಮೇ ತಿಂಗಳಲ್ಲಿ ನಡೆಸುವಂತೆ ಆರ್ಡರ್ ಮಾಡುತ್ತೇನೆ. ನೀವು ಇದಕ್ಕೆ ದಯವಿಟ್ಟು ಒಪ್ಪಿಕೊಳ್ಳಬೇಕು ಎಂದು ಕೇಳಿಕೊಂಡರು, ಕೆಲವು ವಿದ್ಯಾರ್ಥಿಗಳು ಈ ಬಗ್ಗೆ ತಮ್ಮ ತಮ್ಮಲ್ಲೆ ಗುಂಪಾಗಿ ಚರ್ಚೆ ನಡೆಸಿದರು. ಇದನೆಲ್ಲಾ ಗಮನಿಸಿದ ಕೆ.ಸಿ.ರೆಡ್ಡಿಯವರು ಮತ್ತೊಮ್ಮೆ ನನ್ನ ಮಾತನ್ನು ಒಪ್ಪಿಕೊಳ್ಳಿ. ನನ್ನ ಸರ್ಕಾರ ನಿಮಗೆ ಬೇಕಾದ ಎಲ್ಲಾ ಸೌಲಭ್ಯಗಳನ್ನು ನೋಡಿಕೊಳ್ಳುತ್ತದೆ ಎಂದು ಹೇಳಿಕೊಂಡಾಗ ಆ ಮನವಿಗೆ ಒಪ್ಪಿಕೊಳ್ಳಲೇ ಬೇಕಾಯಿತು. ಇದು ಸತ್ತಾರ್ ಅವರ ನೇತೃತ್ವದ ಇನ್ನೊಂದು ಮುಖ. ಮೇ ತಿಂಗಳಿನಲ್ಲಿ ಪರೀಕ್ಷೆ ನಡೆಸಿ ಸರ್ಕಾರ ತಾನು ಆಡಿದ ಮಾತಿನಂತೆ ನಡೆದುಕೊಂಡಿತು. ಇದೇ ಕಾಲದಲ್ಲಿ ಎಂದರೆ 1946ರಲ್ಲಿ ಇಲ್ಲಿ ಹಿರೋಡೆಯಲ್ಲಿ ಒಂದು ಕರ್ನಾಟಕ ಸಂಘವನ್ನು ಇವರು ತಮ್ಮ ಸ್ನೇಹಿತರಾದ ಶ್ರೀ ಟಿ.ವಿ.ಶ್ರೀನಿವಾಸಯ್ಯ ಮುಂತಾದವರ ಸಹಕಾರದಿಂದ ಸ್ಥಾಪನೆ ಮಾಡಿದರು. ಈ ಶ್ರೀನಿವಾಸಯ್ಯ ಮಹಾರಾಜ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದು. ಶ್ರೀ ಹಾ.ಮಾ.ನಾಯಕ ಮತ್ತು ಕೆ.ವಿ.ಸುಬ್ಬಣ್ಣ ಇವರ ಸಹ ಪಾಠಿಗಳಾಗಿದ್ದರು, ಈ ರೀತಿ ಮಂಡ್ಯ ಜಿಲ್ಲೆಯಲ್ಲಿ ಸ್ಥಾಪನೆಯಾದ ಕರ್ನಾಟಕ ಸಂಘಗಳಲ್ಲಿ ಇದು ಎರಡನೆಯದು, ಈ ಶ್ರೀನಿವಾಸಯ್ಯ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಇಂಗ್ಲೆಂಡಿಗೆ ಹೊರಟು ಹೋದರು, ಆ ನಂತರ ಈ ಸಂಘದ ಸಂಪೂರ್ಣ ಹೊಣೆಗಾರಿಕೆ ಈ

ಅಬ್ದುಲ್ ಸತ್ತಾರ್ ಮತ್ತು ಅವರ ಸ್ನೇಹಿತರ ಮೇಲೆ ಬಿದ್ದಿತು, ಈ ಸಂಬಂಧ ಆಗಿನ ಖ್ಯಾತ ನಾಮರಾದ ಅನೇಕ ಸಾಹಿತಿಗಳನ್ನು ಕರೆದು ತಂದು ಹಿರೋಡೆಯಲ್ಲಿ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು. ಈ ರೀತಿ ಮೈಸೂರಿನಲ್ಲಿದ್ದ ಶ್ರೀ ಗೋಪಾಲಕೃಷ್ಣ ಅಡಿಗ, ಶ್ರೀ ತ.ರಾ.ಸು. ಮುಂತಾದವರನ್ನು ಕರೆದು ತರುತ್ತಿದ್ದರು. ಬೆಂಗಳೂರಿನಿಂದ ಶ್ರೀ ಅ.ನ.ಕೃ. ದೇವುಡು, ಮುಂತಾದವರನ್ನು ಕರೆದು ತರುತ್ತಿದ್ದರು. ಈ ಮೂಲಕ ಈ ಸಾಹಿತಿಗಳ ನಿರಂತರ ಸಂಪರ್ಕ ಇವರಿಗೆ ಏರ್ಪಟ್ಟು ಬಹಳ ವರ್ಷಗಳ ಕಾಲ ಪತ್ರ ವ್ಯವಹಾರ ರೂಪದಲ್ಲಿ ಮುಂದುವರೆಯಿತು. ಆಗ ಇವರ ನಿಕಟ ಸಂಪರ್ಕದಲ್ಲಿ ಇದ್ದ ಸಾಹಿತಿಗಳೆಂದರೆ. ಶ್ರೀ ಅಡಿಗರವರು ಮತ್ತು ಶ್ರೀ ತ.ರಾ.ಸು.ರವರು ವಾರದಲ್ಲಿ ಕನಿಷ್ಠ ಪಕ್ಷ ಮೂರು ದಿನವಾದರೂ ಇವರ ಭೇಟಿ ಮಾಡುತ್ತಿದ್ದರು. ಆ ಕಾಲದಲ್ಲಿ ಅನೇಕ ಸಾಹಿತ್ಯಕ, ಸಾಮಾಜಿಕ, ಚಾರಿತ್ರಿಕ ವಿಷಯಗಳ ಮೇಲೆ ಇವರಲ್ಲಿ ಪರಸ್ಪರ ಸಂವಾದಗಳು ಆಗುತ್ತಿದ್ದವು. ಇತಿಹಾಸದ ಬಗ್ಗೆ ಆ ಕಾಲದ ಒಬ್ಬ ಶ್ರೇಷ್ಠ ಸಂಶೋಧಕರು, ಇತಿಹಾಸಕಾರರು ಆಗಿದ್ದ ದಿವಂಗತ ಶ್ರೀಕಂಠಶಾಸ್ತ್ರಿಗಳ ಪರಿಚಯ ಮತ್ತು ಮಾತುಕತೆಗಳು ಮುಂದುವರೆದು ಈ ರೀತಿ ಚಟುವಟಿಕೆಗಳಲ್ಲಿ ತಮ್ಮನ್ನು ಸದಾ ಕಾಲ ತೊಡಗಿಸಿಕೊಳ್ಳುತ್ತಿದ್ದರು. ಇವರ ಇನ್ನೊಂದು ಆಸಕ್ತ ಹವ್ಯಾಸ ಪುಸ್ತಕಗಳ ಓದುವಿಕೆ ಮತ್ತು ಸಂಗ್ರಹಿಸುವುದು. ಇವರು ಮೈಸೂರಿಗೆ ಪಾಂಡವಪುರ ರೈಲ್ವೆ ನಿಲ್ದಾಣದ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದರು. ಹಾಗೂ ಕಾಲೇಜಿಗೆ ಬಿಡುವು ದೊರೆತಾಗ ಕಾಲೇಜಿನಿಂದ ಹೊರಟು ನೂರಡಿ ರಸ್ತೆ, ಲ್ಯಾನ್ಸ್‌ಡೌ ಬಜಾರ್, ದೇವರಾಜ ಮಾರ್ಕೆಟ್, ಮುಂತಾದ ಕಡೆ ಬಳಸಿಕೊಂಡು ರೈಲ್ವೆ ನಿಲ್ದಾಣಕ್ಕೆ ಬರುತ್ತಿದ್ದರು. ಆ ಕಾಲದಲ್ಲಿ ಲ್ಯಾನ್ಸ್‌ಡೌ ಬಜಾರ್ ಮತ್ತು ನೂರಡಿ ರಸ್ತೆಗಳಲ್ಲಿ ಇದ್ದ ಕೆಲವು ಪುಸ್ತಕದ ಅಂಗಡಿಗಳಿಗೆ ಪ್ರತಿ ದಿನ ಭೇಟಿಕೊಟ್ಟು ತಮಗೆ ಬೇಕಾದ ಪುಸ್ತಕಗಳನ್ನು ಕೊಂಡು ತರುತ್ತಿದ್ದರು. ಇವರು ಈ ಹವ್ಯಾಸ ಬೆಳಸಿಕೊಳ್ಳಲು ಮುಖ್ಯ ಕಾರಣ ಇವರಿಗೆ ಸಾಹಿತಿಗಳಾದ ಅ.ನ.ಕೃ, ತ.ರಾ.ಸು ಮತ್ತು ಇವರ ಶಿಕ್ಷಕರಾಗಿದ್ದ ತ.ಸು.ಶಾಮರಾಯರು. ಶಾಮರಾಯರು ಪ್ರತಿ ಶನಿವಾರ ತಮ್ಮ ವಿದ್ಯಾರ್ಥಿಗಳಿಗೆ ಲೈಬ್ರರಿಯಲ್ಲಿ ಬಂದಿರುವ ಹೊಸ ಪುಸ್ತಕಗಳ ಬಗ್ಗೆ ಹೇಳುತ್ತಿದ್ದರು. 1950ರಲ್ಲಿ ಇವರ ಅಧ್ಯಕ್ಷತೆಯಲ್ಲಿ ಹಿರೋಡೆಯಲ್ಲಿ ಒಂದು ರಂಗಮಂಟಪ ಸಂಸ್ಥೆಯನ್ನು ಹುಟ್ಟುಹಾಕಿದರು. ಇದರ ಉದ್ದೇಶ ಕೆಲವು ನಾಟಕಗಳನ್ನು ಹಾಡುವುದೇ ಆಗಿತ್ತು. ಈ ಸಂಸ್ಥೆಯ ಆಶ್ರಯದಲ್ಲಿ ತಿಂಗಳಿಗೆ ಒಂದು ಸಾಮಾಜಿಕ ನಾಟಕ, ಹಾಗೂ ಮೂರು ತಿಂಗಳಿಗೆ ಒಂದು ಕಂಪನಿ ನಾಟಕ ಆಡುವುದೇ ಆಗಿತ್ತು. ಹೀಗೆ ಇವರು ಕಲಿತು ಪ್ರದರ್ಶಿಸಿದ ಸಾಮಾಜಿಕ ನಾಟಕಗಳಲ್ಲಿ ಟಿ.ಪಿ.ಕೈಲಾಸಂ, ಪರ್ವತವಾಣಿ, ಹಾಗೂ ಶ್ರೀರಂಗ, ಇವರ ನಾಟಕಗಳು ಸೇರಿವೆ. ಕಂಪನಿ ನಾಟಕಗಳು ಎಂದರೆ ಹೇಮರೆಡ್ಡಿ ಮಲ್ಲಮ್ಮ, ರಾಜಗೋಪಿಚಂದ್, ಗೋರಕುಂಬಾರ, ಮುಂತಾದ ನಾಟಕಗಳಾಗಿವೆ. ಇವರ ಈ ಪ್ರಯತ್ನಗಳಲ್ಲಿ ಆ ಕಾಲದಲ್ಲಿ ಇದ್ದ ಎಲ್ಲಾ ಇಲಾಖೆಯ ಸರ್ಕಾರಿ ನೌಕರರು ಪ್ರಮುಖವಾಗಿ ಪಾಲ್ಗೊಳ್ಳುತ್ತಿದ್ದರು. ಈ

ಪೈಕಿ ವಿಶೇಷವಾಗಿ ಶ್ರೀ ಎ.ಸೂರ್ಯನಾರಾಯಣರಾವ್, ಶ್ರೀ ಡಿ.ಆರ್.ಮುರುಗೇಂದ್ರಪ್ಪ, ಶ್ರೀ ಬಿ. ರಂಗಸ್ವಾಮಿ ಇವರು ಉಲ್ಲೇಖ ನಾರ್ಹರಾಗಿದ್ದಾರೆ. ಈ ಸಂಘದ ಕಾರ್ಯಕ್ರಮಗಳು ವಿಶೇಷವಾಗಿ ಮಿಡಲ್‌ಸ್ಕೂಲ್ ಮುಂಭಾಗದಲ್ಲಿ ಏರ್ಪಡುತ್ತಿದ್ದರಿಂದ ಊರಿನ ಎಲ್ಲಾ ಭಾಗಗಳ ಜನರು ಕೂಡ ಇವುಗಳಲ್ಲಿ ಪ್ರೇಕ್ಷಕರಾಗಿ ಭಾಗವಹಿಸುತ್ತಿದ್ದರು. ಹೀಗೆ ಕರ್ನಾಟಕ ಸಂಘ ವಿದ್ಯಾರ್ಥಿಗಳು, ಅಧಿಕಾರಿಗಳು ಮತ್ತು ಜನಗಳ ನಡುವೆ ಒಂದು ಭಾವೈಕ್ಯದ ಸಾಮರಸ್ಯವನ್ನು ಉಂಟು ಮಾಡಿದ ಪ್ರಮುಖ ಸಂಸ್ಥೆಯಾಯಿತು. ಈ ಚಟುವಟಿಕೆಗಳ ನಡುವೆ ಅಂದರೆ ಐವತ್ತರ ದಶಕದಲ್ಲಿ ಅಬ್ದುಲ್ ಸತ್ತಾರ್ ಅವರು ಬರವಣಿಗೆಗೆ ಕೈ ಇಟ್ಟರು. ಆ ಕಾಲದಲ್ಲಿ ಮಂಡ್ಯದಿಂದ ದಿವಂಗತ ಕೆ.ವಿ. ಶಂಕರೇಗೌಡರವರ ಸಂಪಾದಕತ್ವದಲ್ಲಿ 'ಜನ ಜೀವನ' ಎಂಬ ಮಾಸ ಪತ್ರಿಕೆ ಮಂಡ್ಯದಿಂದ ಪ್ರಕಟವಾಗುತಿತ್ತು. ಒಮ್ಮೆ ಇವರು ಮಂಡ್ಯಕ್ಕೆ ಹೋಗಿದ್ದಾಗ ಶಂಕರೇಗೌಡರು ಸಿಕ್ಕಿ ನಮ್ಮ ಪತ್ರಿಕೆಗೂ ಒಂದು ಕಥೆ ಕಳುಹಿಸಿಕೊಡಿ ಎಂದು ಹೇಳಿದರು. ಇವರು ಕಥೆಗೆ ಬದಲಾಗಿ 'ಕೃಷ್ಣಕೊಂದ ಸುಧನ್ವ' ಎಂಬ ಹೆಸರಿನಲ್ಲಿ ಒಂದು ಲೇಖನವನ್ನು ಆ ಪತ್ರಿಕೆಗೆ ಕಳುಹಿಸಿಕೊಟ್ಟರು. ಅದು ಪ್ರಕಟವಾಯಿತು. ಇದು ಇವರ ಮೊದಲಿನ ಪ್ರಕಟಿತ ಲೇಖನ. ಇದಾದ ಮೇಲೆ ಇವರು ಬರೆದ ಡಿ.ಹೆಚ್.ಲಾರೆನ್ಸ್ ಕುರಿತ ಲೇಖನ, ಮಾಸ್ತಿ ಅವರ ಜೀವನ ಪತ್ರಿಕೆಯಲ್ಲಿ ಪ್ರಕಟವಾಯಿತು. ಆ ಮೇಲೆ ದಿವಂಗತ ನರಸಿಂಹಮೂರ್ತಿ ಪ್ರಕಟಿಸುತ್ತಿದ್ದ 'ಜನ ಪ್ರಗತಿ' ಮಾಸ ಪತ್ರಿಕೆಯಲ್ಲಿ ಇವರ ಕಥೆಗಳು ಪ್ರಕಟವಾದವು. ಆ ಕಾಲದಲ್ಲಿ ಇವರು ಒಮ್ಮೊಮ್ಮೆ ಇವರ ಮಾವನವರನ್ನು ಕಾಣಲು ಬೆಸಗರಹಳ್ಳಿಗೆ ಹೋಗುವುದಕ್ಕಾಗಿ ಮಂಡ್ಯ ಬಸ್ ನಿಲ್ದಾಣದಲ್ಲಿ ಕಾಯುತ್ತಿರುವಾಗ ಡಾ॥ ಬೆಸಗರಹಳ್ಳಿ ರಾಮಣ್ಣನವರ ಭೇಟಿಯಾಗಿ ಕೆಲವು ವರ್ಷಗಳ ಕಾಲ ಮುಂದುವರೆಯಿತು. ಆಗ ರಾಮಣ್ಣ ಇನ್ನು ಸಾಹಿತ್ಯ ಕ್ಷೇತ್ರಕ್ಕೆ ಬಂದ ಹೊಸ ಕಾಲ. ಇವರಿಬ್ಬರಲ್ಲಿ ಈ ಬಗ್ಗೆ ಬಹಳಷ್ಟು ಚರ್ಚೆಗಳು ನಡೆಯುತ್ತಿದ್ದವು. ತಮ್ಮ ಪುಸ್ತಕಗಳ ಓದು ಮತ್ತು ಸಂಗ್ರಹ ಕಾರ್ಯವನ್ನು ಮುಂದುವರೆಸಿ ಮನೆಯಲ್ಲಿ ಒಂದು ಸಣ್ಣ ಪುಸ್ತಕ ಭಂಡಾರವನ್ನು ಇಟ್ಟುಕೊಂಡಿದ್ದರು. ಇದೇ ಕಾಲದಲ್ಲಿ ಕೆಲವು ಹಿರಿಯರ ಸೂಚನೆಯಂತೆ ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳಿಗೆ ಮನೆ ಪಾಠ ಹೇಳಲು ಪ್ರಾರಂಭಿಸಿದರು. ಇದರಿಂದ ಹೈಸ್ಕೂಲ್‌ನ ಕೆಲವು ಉಪಾಧ್ಯಾಯರು ಇವರ ದ್ವೇಷಿಗಳಾದರು ಈ ದ್ವೇಷ ಕೊನೆಯವರೆಗೂ ಮುಂದುವರೆಯಿತು. ಹೈಸ್ಕೂಲ್ ಉಪಾಧ್ಯಾಯರ ಪೈಕಿ ಮೂರು- ನಾಲ್ಕು ಜನ ಮಾತ್ರ ಇವರೊಂದಿಗೆ ಮಾತಾನಾಡುತ್ತಿದ್ದರು. ಹೀಗೆ ವಿದ್ಯಾರ್ಥಿಗಳನ್ನು ಮನೆ ಪಾಠಕ್ಕೆ ಸೇರಿಸಿಕೊಳ್ಳುವ ಸಂದರ್ಭದಲ್ಲಿ ಇವರ ಮನೆ ಬಾಗಿಲು ಎಲ್ಲಾ ವಿದ್ಯಾರ್ಥಿಗಳಿಗೂ ಮುಕ್ತವಾಗಿ ತೆರೆದಿತ್ತು. ಆಗ ದಲಿತ ವಿದ್ಯಾರ್ಥಿಗಳನ್ನು ಮೇಲುವರ್ಗದ ಜನ ಮನೆ ಪಾಠಕ್ಕೆ ಸೇರಿಸುತ್ತಿರಲಿಲ್ಲ, ಹೀಗಾಗಿ ಅವರಿಗಿದ್ದ ಏಕೈಕ ಅವಕಾಶ ಇವರ ಮನೆ, ಈ ವಿದ್ಯಾರ್ಥಿಗಳಲ್ಲಿ ಬಹಳಷ್ಟು ಜನ ತೀರ ಆರ್ಥಿಕವಾಗಿ ಹಿಂದುಳಿದಿದ್ದರು, ಇವರು ತಮ್ಮ ಪೋಷಕರ ಜೊತೆಯಲ್ಲಿ ಬಂದು ಸತ್ತಾರ್‌ರವರನ್ನು ಕಂಡು ತಮ್ಮನ್ನು ಪಾಠಕ್ಕೆ ಸೇರಿಸಿಕೊಳ್ಳಬೇಕೆಂದು

ಕೇಳುತ್ತಿದ್ದರು. ಪೋಷಕರು ತಾವು ತಂದಿದ್ದ ಹತ್ತು-ಹದಿನೈದು ರೂಪಾಯಿಗಳನ್ನು ಕೊಟ್ಟು ಕೈ ಮುಗಿಯುತ್ತಿದ್ದರು. ಸತ್ತಾರ್‌ರವರು ಮರುಮಾತನಾಡದೆ ಅವಧಿ ಮುಗಿಯುವವರೆಗೆ ಪಾಠ ಹೇಳುತ್ತಿದ್ದರು. ಮತ್ತೆ ಅವರನ್ನು ಕೇಳುತ್ತ ಇರಲಿಲ್ಲ. ಇವರು ಹೈಸ್ಕೂಲ್ ವಿದ್ಯಾರ್ಥಿಗಳಿಗೆ ಬೇಕಾದ ಎಲ್ಲಾ ವಿಷಯಗಳನ್ನು ಕುರಿತು ಪಾಠ ಮಾಡುವ ಶಕ್ತಿ ಪಡೆದಿದ್ದರು. ಇಂಗ್ಲೀಷ್ ಮತ್ತು ಕನ್ನಡ ಇವರ ಆಸಕ್ತಿಯ ವಿಷಯಗಳು ವಿಜ್ಞಾನ, ಗಣಿತ, ಇವರು ಕಲಿತ ವಿಷಯಗಳು ಈ ನಡುವೆ ಚರಿತ್ರೆ, ಭೂಗೋಳಗಳನ್ನು ನೋಡಿಕೊಂಡು ಅವುಗಳ ಪರಿಚಯವನ್ನು ಪಡೆದಿದ್ದರಿಂದ ವಿದ್ಯಾರ್ಥಿಯ ಎಲ್ಲಾ ಅವಶ್ಯಕತೆಗಳನ್ನು ಪೂರೈಸುವ ಶಕ್ತಿ ಇವರಿಗೆ ಇತ್ತು. ಈ ವಿಷಯ ಊರಿನ ಅನೇಕ ಮೇಲು ವರ್ಗದ ಜನಗಳ ಟೀಕೆಗಳಿಗೆ ಒಳಗಾಗಿತ್ತು. ಆದರೆ ಯಾರು ಪ್ರಕಟವಾಗಿ ಮಾತನಾಡುತ್ತಿರಲಿಲ್ಲ, ಹೀಗಾಗಿ ಅನೇಕ ವರ್ಷಗಳ ಕಾಲ ಸುಮಾರು ಮೂವತ್ತು ವರ್ಷಗಳ ಕಾಲ ಮನೆ ಪಾಠ ಹೇಳಿ ಅ ಮೇಲೆ ಅದನ್ನು ಬಿಟ್ಟರು. ಅಷ್ಟು ಹೊತ್ತಿಗೆ ಇವರಿಗೆ ಸಂಸಾರ ಹೊಣೆ ಹೆಗಲಿಗೆ ತಗುಲಿ ಕೊಂಡಿತ್ತು, ಅಲ್ಲಿಂದ ಆಚೆಗೆ ಇವರು ವಿಶೇಷವಾಗಿ ಸಾಹಿತ್ಯದ ಕಡೆಗೆ ಗಮನಕೊಟ್ಟು ಐವತ್ತರ ದಶಕದಲ್ಲಿ ಅನೇಕ ನಾಟಕಗಳನ್ನು ಆಕಾಶವಾಣಿ,ಮೈಸೂರು, ಬೇಂಗಳೂರು ಮತ್ತು ಧಾರವಾಡಗಳಿಗೆ ಕಳುಹಿಸಿಕೊಟ್ಟರು, ಅಲ್ಲಿ ಇವು ಪ್ರಸಾರವಾದವು ಈ ರೀತಿ ಸುಮಾರು ಹದಿನೈದು ನಾಟಕಗಳು, ಹದಿನೈದು ಚಿಂತನಗಳು, ಒಂದು ಕಥೆ, ಒಂದು ಸಂದರ್ಶನ ಆಕಾಶವಾಣಿಯ ಮೂಲಕ ಪ್ರಸಾರವಾಗಿವೆ. ಇದರ ಜೊತೆಗೆ ಪತ್ರಿಕೆಗಳಿಗೆ ಮತ್ತು ಕೆಲವು ಸಂಕಲನಗಳಿಗೆ ಇವರು ಬರೆದ ಲೇಖನಗಳು, ಕಥೆಗಳು ಪ್ರಕಟವಾಗಿವೆ. ಹೀಗೆ ಮಯೂರ, ಪ್ರಜಾಮತ, ಸೌರಭ, ನಿವೇದಿತಾ,ಎಂಬ ಪತ್ರಿಕೆಗಳಲ್ಲಿ ಶಿವಾರ್ಪಣ, ಗಿರಿಮಲ್ಲಿಗೆ, ಹರತಿಸಿರಿ, ಮುಂತಾದ ಸಂಕಲನಗಳಲ್ಲಿ ಇವರ ಕಥೆಗಳು ಲೇಖನಗಳು ಪ್ರಕಟವಾಗಿವೆ. ಹೀಗೆ ಸುಮಾರು ಹತ್ತು ಕಥೆಗಳು, 15, ಲೇಖನಗಳು ಪ್ರಕಟಗೊಂಡಿವೆ. ಅಲ್ಲಿಂದ ಕಾದಂಬರಿ ರಚನೆಗೂ ಇವರು ಕೈ ಹಾಕಿದ್ದಾರೆ. ಕರ್ನಾಟಕ, ಭಾರತ ರಾಜ್ಯಗಳಲ್ಲೆಲ್ಲ, ಒಂದು ವಿಶೇಷ ಐತಿಹಾಸಿಕ, ಸ್ಥಾನಮಾನಗಳನ್ನು ಪಡೆದುಕೊಂಡ ವಿಷಯ ತಿಳಿದಿದ್ದ ಇವರು ಕರ್ನಾಟಕದ ಈ ವಿಶೇಷತೆಗೆ ಕಾರಣರಾದ ಮತ್ತು ತಮ್ಮ ದೇಶದ ಸ್ವಾತಂತ್ರ್ಯಕ್ಕೆ ಹೋರಾಡಿ ಮಡಿದ ಅನೇಕ ವೀರರು, ಮತ್ತು ಹುತಾತ್ಮರು, ಕರ್ನಾಟಕಕ್ಕೆ ಸೇರಿದ್ದ ಸಂಗತಿಯನ್ನು.ಗಮನಿಸಿ. ಇವರ ಮೇಲೆ ಕಾದಂಬರಿಗಳನ್ನು ಬರೆಯಬೇಕೆಂದು ಸಂಕಲ್ಪಿಸಿದರು. ಆ ಕಾಲಕ್ಕಾಗಿ ಶ್ರೀರಂಗಪಟ್ಟಣವನ್ನು ಕೇಂದ್ರವಾಗಿ ಮಾಡಿಕೊಂಡು ಇಡೀ ದಕ್ಷಿಣ ಭಾರತವನ್ನು ಗೆದ್ದು ತನ್ನ ಸ್ವಾಧೀನದಲ್ಲಿ ಇಟ್ಟುಕೊಂಡಿದ್ದ ಹೈದರಾಲಿಯನ್ನು ತಮ್ಮ ಕಾದಂಬರಿಯ ಪ್ರಥಮ ನಾಯಕನಾಗಿ ಆರಿಸಿಕೊಂಡು, ಆತನ ಮೇಲೆ ಎರಡು ಕಾದಂಬರಿಗಳನ್ನು ಬರೆದರು. ಈ ಬಗ್ಗೆ ಇವರ ಆಪ್ತರು ಅತ್ಯಂತ ಆಸಕ್ತರು,ಆಗಿದ್ದ ಸಾಹಿತಿ ತ.ರಾ.ಸು. ಇವರಿಗೆ 'ಸತ್ತಾರ್ ನಾನು ಈ ನಾಯಕನ ಋಣ ನನ್ನ ಜಿಲ್ಲೆಗೆ ಸಂದಾಯ ಮಾಡಿದ್ದೇನೆ. ಹೈದರಾಲಿಯ ಋಣ ನಿನ್ನ ಮೇಲಿದೆ. ಆತ ಮಾಡಿದ ಕೆಲಸ

ಅದ್ಭುತವಾದದ್ದು.ಅವನನ್ನು ಕುರಿತು ಕಾದಂಬರಿ ಬರೆದು ನಿನ್ನ ಜಿಲ್ಲೆಯ ಋಣ ತೀರಿಸು ಎಂದು [ದುರ್ಗಾಸ್ತಮನ ಮುಗಿಸಿದ ದಿವಸ ಅವರ ಮನೆಯಲ್ಲಿ ಮಾತನಾಡುತ್ತ ಹೇಳಿದರು] ಈ ಮಾತನ್ನು ಹೈದರಾಲಿಬರೆದು ತಮ್ಮ ಸ್ನೇಹಿತರ ಆ ಮಾತನ್ನು ಕಾರ್ಯಸಹ ನೆರವೇರಿಸಿದರು. ಹಾಗೆಯೇ ಚಿತ್ರದುರ್ಗದ ಕೊನೆಯನಾಗತಿಯವರಾದ ಶ್ರೀಮತಿ. ಯಶೋದಮ್ಮ ನಾಗತಿಯವರಿಗೆ ತ.ರಾ.ಸು ರವರು ಕೊಟ್ಟಿದ್ದ ಮಾತು ಪೂರೈಸಲು ಆಗದೆ ಕಾಲವಾಗಿದ್ದರು. ಆ ಬಗ್ಗೆ ಇದ್ದ ಈ ಋಣವನ್ನು ಕೈಗೆ ಎತ್ತಿಕೊಂಡು ಶ್ರೀಮತಿ ಅಂಬುಜ ತ.ರಾ.ಸು ರವರ ಅಪೇಕ್ಷೆಯಂತೆ ಇವರು ಸಂಶೋದನೆಯನ್ನು ಅಧ್ಯಯನವನ್ನು ಮಾಡಿ ಚರಿತ್ರೆಯೇ ಇಲ್ಲದಿದ್ದ ಆದರೆ ಕರ್ನಾಟಕದ ನಾಯಕರ ಪೈಕಿ. ಒಂದು ಉಚ್ಚಾಸ್ಥಾನದಲ್ಲಿ ಇದ್ದ ತರೀಕೆರೆಯ ಪಾಳೆಗಾರರ ಬಗ್ಗೆ ಚರಿತ್ರೆಯನ್ನು ಬರೆದರು. ಆ ಪೈಕಿ. ತೀರ ಗಮನಾರ್ಹನಾದ ವ್ಯಕ್ತಿ ಸರ್ಜಾ ಹನುಮಪ್ಪನಾಯಕ. ಈತ ಟಿಪ್ಪುವಿನ ಮರಣನಂತರ ಬ್ರಿಟಿಷರ ಮೇಲೆ ಹಿಡಿದು ಶಸಾಸ್ತ್ರ ಹೋರಾಟಕ್ಕೆ ಇಳಿದ ನಾಯಕ ಕುಲದ ವೀರ. ಅವನನ್ನು ಕುರಿತು ಸರ್ಜಪ್ಪನಾಯಕ ಎಂಬ ಕಾದಂಬರಿಯನ್ನು ರಚಿಸಿದರು. ಎರಡು,ಮೂರು& ನಾಲ್ಕನೇ ಮೈಸೂರು ಯುದ್ಧಗಳಲ್ಲಿ ಬ್ರಿಟಿಷರನ್ನು ಎದುರಿಸಿ, ಹೋರಾಟ ಮಾಡಿ ಸ್ವಜನರ ಮತ್ತು ತನ್ನ ಅಧಿಕಾರಿಗಳ ದ್ರೋಹದಿಂದ ಹುತಾತ್ಮನಾದ ಟಿಪ್ಪು ಸುಲ್ತಾನನ್ನು ಕುರಿತು ಒಂದು ಕಾದಂಬರಿ ರಚಿಸಿದರು. ಇದಾದ ಮೇಲೆ ವಿಜಯ ನಗರದವರ ಅಧೀನದಲ್ಲಿದ್ದ ಮೈಸೂರು ರಾಜ್ಯವನ್ನು ಧೀರ, ಪ್ರಾಮಾಣಿಕತೆಯಿಂದ ಮತ್ತು ಶೌರ್ಯದಿಂದ ರಕ್ಷಿಸಿ, ಮೈಸೂರಿನ ಒಡೆಯರ ಆಳ್ವಿಕೆಗೆ ಶಾಶ್ವತವಾದ ನೆಲೆಗಟ್ಟನ್ನು ಹಾಕಿಕೊಟ್ಟವರು. ರಾಜ ಒಡೆಯರು, ಇವರನ್ನು ಕುರಿತು ಒಂದು ಕಾದಂಬರಿಯನ್ನು ರಚಿಸಿದರು. ಸಾಮಾಜಿಕ ಕಾದಂಬರಿಗಳನ್ನು ಕ್ಷೇತ್ರಕ್ಕೆ ಪ್ರವೇಶಿಸಿ, ಕತ್ತರಿಯ ನಡುವೆ "ಯಾರಿಗೆ ಯಾರು ಇಲ್ಲ, ಮತ್ತು ಮರು ಹುಟ್ಟು ಎಂಬ ರಚಿಸಿದ್ದಾರೆ. ಈ ಪೈಕಿ, 'ಮರು ಹುಟ್ಟು' ಪ್ರಕಾಟವಾಗಿದೆ. ಇವರ ಸಾಹಿತ್ಯ ಜೀವನದ ಪ್ರಾರಂಭದಲ್ಲಿ ಇವರಿಗೆ ಪತ್ತೆದಾರಿ ಕಥೆಗಳು & ಕಾದಂಬರಿಗಳು ಬಹಳ ಪ್ರಿಯವಾಗಿದ್ದವು. ಅವುಗಳಲ್ಲಿ ನೂರಕ್ಕೂ ಮೇಲ್ಪಟ್ಟು ಆಯ್ದೆ ಕೃತಿಗಳನ್ನು ಮನೆಯಲ್ಲಿ ಶೇಖರಿಸಿಕೊಂಡಿದ್ದರು. ಈ ನಡುವೆ ಕನ್ನಡ ಪತ್ತೆದಾರಿ ಕ್ಷೇತ್ರದಲ್ಲಿ ಹೆಸರು ಮಾಡಿದ್ದ ನರಸಿಂಹಯ್ಯನ ಬಗ್ಗೆ ಇವರಿಗೆ ಕುತೂಹಲ ಉಂಟಾಗಿ ಆತನನ್ನು ಬೆಂಗಳೂರಿನ ಚಿಕ್ಕ ಲಾಲ್‌ಬಾಗ್‌ನಲ್ಲಿ ಇದ್ದ ಆತನ ಮನೆಯಲ್ಲಿ ಭೇಟಿಮಾಡಿದರು. ಆ ಕಾಲಕ್ಕೆ ಇವರು ಒಂದು 'ರಕ್ತದ ರುಚಿ' ಎಂಬ ಹೆಸರಿನ ಪತ್ತೆದಾರಿ ಕಾದಂಬರಿಯನ್ನು ಬರೆದಿದ್ದರು. ನರಸಿಂಹಯ್ಯನನ್ನು ಕರೆದುಕೊಂಡು ಅವಿನ್ಯು ರೋಡಿನಲ್ಲಿ ಇದ್ದ ಪ್ರಕಾಶಕರ ಬಳಿ ಹೋದಾಗ ಆ ಪ್ರಕಾಶಕ ನರಸಿಂಹಯ್ಯನವರನ್ನು ಕಾಡಿ ಅವರಿಂದಲೇ 25ರೂಗಳನ್ನು ಪಡೆದುಕೊಂಡ. ಈ ಘಟನೆಯನ್ನು ಕಂಡ ಸತ್ತಾರ್ ನರಸಿಂಹಯ್ಯನ ಜೊತೆಯಲ್ಲಿ ಅಲ್ಲೆ ಇದ್ದ ಒಂದು ಹೋಟೆಲ್‌ನಲ್ಲಿ ಕುಳಿತು ಆ ಬಗ್ಗೆ ತಮ್ಮ ತಮ್ಮಲ್ಲೇ ಚರ್ಚಿಸಿ ಲೇಖಕರ ಮನಸ್ಥಿತಿಯ ಬಗ್ಗೆ ಮಾತನಾಡಿಕೊಂಡರು. ಇವರ

ಇನ್ನೊಂದು ಆಸಕ್ತಿಯ ವಿಷಯ ಎಂದರೆ ಖನಿಜಗಳ, ಪುರಾತತ್ವನೆಲೆಗಳ ಮತ್ತು ಶಾಸನಗಳ ಶೋಧನೆ. ಈ ಕ್ಷೇತ್ರದಲ್ಲಿ ಇವರು ಪಾಂಡವಪುರ, ಕೃಷ್ಣರಾಜಪೇಟೆ, ಮತ್ತು ನಾಗಮಂಗಲ ತಾಲ್ಲೋಕಿನ ಅನೇಕ ಸ್ಥಳಗಳಲ್ಲಿ ಸುತ್ತಾಡಿದರು. ಈ ಸುತ್ತಾಟದಲ್ಲಿ ಒಮ್ಮೊಮ್ಮೆ ಬೆಳಗ್ಗೆ, 9. 10 ಘಂಟೆಗೆ ಮನೆ ಬಿಟ್ಟರೆ ಸಾಯಂಕಾಲ 5 ಗಂಟೆಯ ಕಾಲ ಕಾಡು ಮೇಡುಗಳಲ್ಲಿ ಸುತ್ತಾಡಿದ್ದುಂಟು. ಆಗ ಒಳಗೆ ಒಂದು ತುಂಡು ಬ್ಯಾಗ್, ಅದರಲ್ಲಿ, ಒಂದು ಸುತ್ತಿಗೆ ಉಳಿಗಳು, ಒಂದು ಇಂಚು ಪಟ್ಟಿ ಮತ್ತು ಒಂದು ಅಯಸ್ಕಾಂತ, ಒಂದು ಡೈರಿ ಇರಿಸಿಕೊಂಡು ಹೋಗುತ್ತಿದ್ದರು. ಅಲ್ಲಿ ತಮಗೆ ಕಂಡ ವಿಶೇಷ ಖನಿಜಗಳು ಮಾದರಿಗಳನ್ನು ತೆಗೆದುಕೊಳ್ಳುತ್ತಿದ್ದರು. ಅಲ್ಲಿ ಕಂಡು ಬಂದ ಶಾಸನಗಳ ಬಗ್ಗೆ ಟಿಪ್ಪಣಿ ಮಾಡಿಕೊಳ್ಳುತ್ತಿದ್ದರು. ಈ ವಿಷಯವನ್ನು ತಮ್ಮ ಸ್ನೇಹಿತರಾಗಿದ್ದ ಪುರಾತತ್ವ ಇಲಾಖೆಯ ದಿವಂಗತ ಹವಳಯ್ಯ, ನಾಗರಾಜರಾವ್, ಮತ್ತಿತರರ ಗಮನಕ್ಕೆ ತರುತ್ತಿದ್ದರು. ಹವಳಯ್ಯನ ಜೊತೆಯಲ್ಲಿ ಸುತ್ತಾಡಿ ಸುಮಾರು ಹತ್ತು ಶಾಸನಗಳನ್ನು ಹೊಸದಾಗಿ ಪತ್ತೆ ಮಾಡಿದರು. ಇವುಗಳ ಅಚ್ಚು ತೆಗೆಯುವ ಕೆಲಸ, ಹವಳಯ್ಯನವರದ್ದು, ಓದುವ
ಕೆಲಸ ನಾಗರಾಜರಾಯರದ್ದು, ಇವು ಶಾಸನ ಇಲಾಖೆಯಲ್ಲಿ ದಾಖಾಲಾಗಿವೆ. ಹೀಗೆ ಪಾಂಡವಪುರದ ಸುತ್ತಾಟದಲ್ಲಿ ಈ ತಾಲ್ಲೂಕಿನಲ್ಲಿ ಇರುವ ಅನೇಕ ಅಪರೂಪದ ಖನಿಜಗಳ ನಿಕ್ಷೇಪಗಳ ಬಗ್ಗೆ ಇವರಿಗೆ ಮಾಹಿತಿ ದೊರೆಯಿತು. ಈ ಅಂಶವನ್ನು ಇವರ ಕೆಲವು ಸ್ನೇಹಿತರ ತಮ್ಮ ಸಂಪಾದನೆಗಾಗಿ ಬಳಸಿಕೊಂಡರು. ಆದರೆ ಇವರು ಮಾತ್ರ ಯಾವುದೇ ವ್ಯವಹಾರಕ್ಕೂ ಹೋಗದೆ ದೂರ ಉಳಿದು ಬರಿಗೈಯಲ್ಲೇ ಇದ್ದಾರೆ. ಇವರ ಮಾತಿನಲ್ಲಿ ಪಾಂಡವಪುರ, ಕೆ. ಆರ್. ಪೇಟೆ ಒಂದು ಪುಟ್ಟ ರತ್ನಗರ್ಭ ಎನ್ನುತ್ತಾರೆ. ನವರತ್ನಗಳ ಪೈಕಿ, ಐದು ರತ್ನಗಳನ್ನು ಬಿಟ್ಟರೆ ಉಳಿದ ರತ್ನಗಳ ಸಣ್ಣ, ಸಣ್ಣ, ನಿಕ್ಷೇಪಗಳು ಈ ಎರಡು ತಾಲ್ಲೂಕುಗಳಲ್ಲಿ ಇವೆ ಎಂಬುದು ಇವರ ಅಭಿಪ್ರಾಯ.

ಪಾಂಡವಪುರ ತಾಲ್ಲೂಕು ಐತಿಹಾಸಕವಾಗಿ ಒಂದು ಪ್ರಮುಖ ತಾಣ ಇಲ್ಲಿ ಹೊಯ್ಸಳೇಶ್ವನೆಂಬ ಬಿರುದಿಗೆ ಪಾತ್ರನಾಗಿದ್ದ ವಿಷ್ಣುವರ್ದನ, ನಡೆದಾಡಿದ್ದ ಪ್ರದೇಶವೇ ತೊಂಡನೂರು. ಆಗ ಈ ಪ್ರದೇಶದಲ್ಲಿ ರಾಮಾನುಜಾಚಾರ್ಯರು ತಮ್ಮ ಶಿಷ್ಯರ ಜೊತೆ ಇರುತ್ತಿದ್ದರು. ಹಾಗೆಯೇ ವಿಷ್ಣುವರ್ಧನನ ರಾಣಿ ಲಕ್ಷ್ಮೀ ಮಹಾದೇವಿ ಮತ್ತು ಮುಂದೆ ಹೊಯ್ಸಳ ಸಾಮ್ರಾಜ್ಯದ ಒಡೆಯನಾದ ನರಸಿಂಹ ಈ ಪ್ರದೇಶದವರು ಈ ಮಹತ್ವ ಪಡೆದಿದೆ. ಇಲ್ಲಿ ಆಗ ಬೇಕಾದ ಐತಿಹಾಸಿಕ ಸಂಶೋಧನೆಗಳು ಇನ್ನು ಬೇಕಾದಷ್ಟು ಇವೆ. ಆ ಕಾಲದಲ್ಲಿ ಹೊಯ್ಸಳರ ಆಡಳಿತ ಕ್ಷೇತ್ರವಾಗಿದ್ದ ಊರು ಈಗಿನ ಹಿರಿಮರಳಿ, [ಮಣಲಿ] ಇಲ್ಲಿಂದ ಹೊಯ್ಸಳರು ಆಡಳಿತ ನಡೆಸುತ್ತಿದ್ದರು. ಇಲ್ಲೂ ಕೂಡ ಸಂಶೋಧನೆಗಳೂ ಆಗ ಬೇಕಾಗಿದೆ. ಇದರ ದಕ್ಷಿಣಕ್ಕಿರುವ ಜೋಡಿ ಬೆಟ್ಟಗಳೂ ಒಂದು ಕಾಲದಲ್ಲಿ ಜೈನರ ತೀರ್ಥ ಕ್ಷೇತ್ರವಾಗಿತ್ತು. ಇಲ್ಲಿ ಅ ಎರೆಡು ಬೆಟ್ಟಗಳ ನಡುವೆ. ಮಧ್ಯಪ್ರದೇಶದಲ್ಲಿ ಅವರ ಒಂದು ಬಸದಿ ಇತ್ತು. ಇದನ್ನು ಹಾಳುಗೆಡೆಲಿದ್ದಾರೆ. ಇದರ ಎದುರಿಗೆ

ಪೂರ್ವದ ಬೆಟ್ಟದ ಮೇಲೆ ಜೈನರ 'ಮಾನಸ್ತಂಭ ಇದೆ. ಇದನ್ನು ವಿರೂಪಗೊಳಿಸಿದ್ದಾರೆ. ಪಶ್ಚಿಮದ ಕಡೆಯ ಬೆಟ್ಟದ ಮೇಲೆ ಒಬ್ಬ ಜೈನ ಮುನಿ ತಪಸ್ಸು ಮಾಡಿದ ಸ್ಥಳ ಇದೆ. ಆ ಗುರುತಾಗಿ ಒಂದು ಪಾದದ ಚಿಹ್ನೆ ಕೆತ್ತಿದ್ದಾರೆ. ಸ್ವಲ್ಪ ಮೇಲೆಕ್ಕೂ ಆತ ಸ್ನಾನ ಮಾಡುತ್ತಿದ್ದ ಒಂದು ಚಿಕ್ಕ ಕೊಳವು ಇದೆ. ಇವೆಲ್ಲವನ್ನು ಕ್ರಮ ಬದ್ಧ ಸಂಶೋಧನೆಗಳು ಅಗ ಬೇಕಾಗಿದೆ. ಇದು ಶ್ರೀ .ಪಿ. ಅಬ್ದುಲ್ ಸತ್ತಾರ್ ಅವರ ಶ್ರಮ ಮತ್ತು ಸಾಧನೆಯ ಕತೆಯನ್ನು ಹೇಳುತ್ತವೆ. ಇವರ ತಮ್ಮ ಅಧ್ಯಯನಗಳಲ್ಲಿ ಕಂಡುಕೊಂಡು ರೋಚಕ ಕಥೆ ತೊಂಡನೂರಿನ ಕರಿಬಂಟ, ಒಬ್ಬ ಐತಿಹಾಸಿಕ ವ್ಯಕ್ತಿ. ಆತನು ಇಲ್ಲಿಗೆ ಬಂದಿದ್ದಾನೆ. ಅದಕ್ಕೆ ನಿಕಟ ಪೂರ್ವದಲ್ಲಿ ತೊಂಡನೂರಿನಲ್ಲಿ ಮೂರನೇ ಬಲ್ಲಾಳ ಆಶ್ರಯ ಪಡೆದಿದ್ದು ಅಲ್ಲಿಂದ ಪೆನಗೊಂಡೆಯ ಕಡೆಗೆ ಹೊರಟು ಹೋದ, ತೊಂಡನೂರಲ್ಲಿ ಅರಾಜಕತೆಯಾಯಿತು.ಅಲ್ಲಿ ಒಕ್ಕಲಿಗ ಜನಾಂಗದ ಒಬ್ಬ ಮಹಿಳೆ ಆಡಳಿತ ನಡೆಸಿದಳು. ಅಕೆ ತೀರ ಪ್ರತಾಪಿ ಮತ್ತು ಬಲಿಷ್ಟ ಸ್ತ್ರೀ, ಅಕೆಯ ಪತಿ ದುರ್ಬಲ ಅಕೆಯ ತಮ್ಮ ಬೊಮ್ಮರಸ ಸೇನಾದಿಪತಿ, ಇವರೆಲ್ಲ ಸೇರಿ ತೊಂಡನೂರಿನಲ್ಲಿ ಆಡಳಿತ ನಡೆಸಿದರು. ಇವಳ ದರ್ಪ,ಸಾಹಸ, ಶಕ್ತಿ ಇವುಗಳಿಂದ ಈಕೆಗೆ ಜನ ತೊಂಡನೂರು ರಾಕ್ಷಸಿ ಎಂದು ಹೆಸರು ಇಟ್ಟರು, ಮುಂದೆ ಇಕೆಯ ಮಗಳ ಪ್ರಕರಣದಲ್ಲಿ ಈಕೆಯ ಕನಸೆಲ್ಲ ನುಚ್ಚು ನೂರಾಯಿತು, ಈಕೆಯು ಐತಿಹಾಸಿಕ ವ್ಯಕ್ತಿ ಈ ಬಗ್ಗೆಯು ಸಂಶೋಧನೆ ಆಗಬೇಕೆಂದು ಸತ್ತಾರ್ ಅವರು ಅಭಿಪ್ರಾಯ ಪಡುತ್ತಾರೆ.

ಇಗ ಇವರು ದೈಹಿಕ ದುರ್ಬಲತೆಯಿಂದ ಬಳಲುತ್ತ ತಮ್ಮ ಕೈಲಾದ ಮಟ್ಟಿಗೆ ಸಾಹಿತ್ಯವನ್ನು ಬರೆಯುತ್ತ ಮಾಡುತ್ತ ಇದ್ದಾರೆ. ಪ್ರಕಟವಾಗಬೇಕಾದ ಅನೇಕ ಕೃತಿಗಳು ಹಸ್ತ ಪ್ರತಿಯಲ್ಲೆ ಉಳಿದಿವೆ.[ ಈ ವಿಷಯಗಳನ್ನು ಖುದ್ದಾಗಿ ಶ್ರೀ ಅಬ್ದುಲ್ ಸತ್ತಾರ್‌ರವರು ನನಗೆ ಹೇಳಿದ್ದನ್ನು ಇಲ್ಲಿ ದಾಖಲಿಸಿದ್ದೇನೆ.]

**3) ಅಬ್ದುಲ್ ಸತ್ತಾರ್ ಅವರ ಸಾಹಿತ್ಯ :-**

(ಅ) **ಕಾದಂಬರಿಗಳು:** ಅಬ್ದುಲ್ ಸತ್ತಾರ್ ಅವರು ಐತಿಹಾಸಿಕ, ಸಾಮಾಜಿಕ ಮತ್ತು ಪತ್ತೆದಾರಿ ಕಾದಂಬರಿಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಕೆಲವು ಪ್ರಕಟವಾಗಿವೆ. ಕೆಲವು ಹಸ್ತಪ್ರತಿಗಳ ರೂಪದಲ್ಲಿ ಇವೆ. ಈ ಪೈಕಿ ಇವರು ರಚಿಸಿಧ ಮೊದಲ ಐತಿಹಾಸಿಕ ಕಾದಂಬರಿ 1. **'ನಿಶ್ಯಂಕಮಲ್ಲ'[ಸರ್ಜಾಪ್ಪ ನಾಯಕ ]** ಈತ ತರೀಕೆರೆಯ ಪಾಳೆಗಾರರ ವಂಶಕ್ಕೆ ಸೇರಿದವನು. ಈತ ಮತ್ತು ಇವನ ತಂದೆ ಸರ್ಜಾರಂಗಪ್ಪ ನಾಯಕ, 19 ನೇ ಶತಮಾನದ ಆದಿಭಾಗದಲ್ಲಿ ಬ್ರಿಟಿಷರ ವಿರುದ್ಧ ಹೋರಾಟ ಮಾಡಿದ ನಾಯಕ ಜನಾಂಗದ ಶಿರೋಮಣಿಗಳು ಇವರು ಟಿಪ್ಪುವಿನ ಮರಣದ ನಂತರ ಬ್ರಿಟಿಷರ ಜೊತೆ ಶಸಾಸ್ತ್ರ ಹಿಡಿದು ಹೋರಾಟಗಳನ್ನು ತಮ್ಮ ಪ್ರಮುಖ ನೆಲೆಗಳಾದ ಕಲ್ಲು ದುರ್ಗಾ, ಮತ್ತು ಕಾಮನ ದುರ್ಗಾಗಳಿಂದ ನಡೆಸಿದರು. ಈ ಪೈಕಿ ಸರ್ಜಾರಂಗಪ್ಪ ನಾಯಕ. ಜಾಗರತರ್ಪು, ಗೋಣಕಲ್ಲು, ಲಾಡಾಯಿಯಲ್ಲಿ. ಗುಂಡಿನ ಏಟಿಗೆ

ತುತ್ತಾಗಿ ಸತ್ತನು. ನಂತರ ಈ ಹೋರಾಟವನ್ನು ಈತನ ಮಗ ಸರ್ಜಾಹನುಪ್ಪನಾಯಕ. [ ಸರ್ಜಾಪ್ಪನಾಯಕ ] ಮುಂದುವರಿಸಿದನು. ಹಾಗೂ ಆಂಗ್ಲರು ಮತ್ತು ಮೈಸೂರು ಒಡೆಯರ ಸೈನ್ಯಗಳನ್ನು ಎರೆಡು ಸಲ ಸೋಲಿಸಿದನು. ಈತ ಕೂಟಯುದ್ಧ ಮಾಡುವುದರಲ್ಲಿ ಪಳಗಿದ್ದನು. ಈತನಿಗೆ ಆ ಕಾಲದ ಮೈಸೂರು  ಸೀಮೆಯ ಆನೇಕ ನಾಯಕರು ಮತ್ತು ಜನರು ಬೆಂಬಲ ಕೊಟ್ಟಿದ್ದರು. ಇವನನ್ನು ಸೋಲಿಸಲು ಆಂಗ್ಲರು ಬೇರೆ ಉಪಾಯವಿಲ್ಲದೆ. ಮೋಸಕ್ಕೆ ಹಾಗೂ ಪಿತೂರಿಗೆ ಕೈ ಇಟ್ಟರು. ಇತನಿಗೆ ಕಡೂರು ಜಿಲ್ಲೆಯ ಹೂವಿನಹಳ್ಳಿ ಎಂಬ ಊರಿನಲ್ಲಿ ಒಬ್ಬ ರಂಗಮ್ಮ ಎಂಬ ಪ್ರೇಯಸಿ ಇದ್ದಳು. ಆಕೆಯನ್ನು ಇಬ್ಬರು ಬ್ರಾಹ್ಮಣ ಆಮೀಲರು ಮತ್ತು ಶಾನುಬೋಗರ ಸಹಾಯದಿಂದ ದುಡ್ಡುಕೊಟ್ಟು ಆನೇಕ ಆಮೀಷಗಳನ್ನು ಒಡ್ಡಿ ತಮ್ಮ ಕಡೆಗೆ ಸೇರಿಸಿಕೊಂಡರು. ಹೀಗೆ ಇವರ ಪಿತೂರಿಯಿಂದ ರಂಗಮ್ಮನು ನಾಯಕನಿಗೆ ವಿಷ ಪೂರಿತ ಆಹಾರ ತಿನ್ನಿಸಿದಳು. ಮೂರ್ಛೆ ಹೋದ ನಾಯಕ ಸ್ವಲ್ಪ ಎಚ್ಚತ್ತು. ಅಲ್ಲಿಂದ ತಪ್ಪಿಸಿಕೊಳ್ಳಲು ನೆಗೆದಾಗ ಆಂಗ್ಲರ ಮತ್ತು ಮೈಸೂರು ಒಡೆಯರ ಸೈನ್ಯ ಅವನ ಮೇಲೆ ದಾಳಿ ಮಾಡಿತು. ಒಂಟಿಯಾಗಿ ಹೋರಾಡುತ್ತ ನಾಯಕ ಸೆರೆ ಸಿಕ್ಕಿದನು. ಇವನನ್ನು ಬೆಂಗಳೂರಿಗೆ ಒಯ್ದರು. ಅಲ್ಲಿ ಸೆರೆಯಲ್ಲಿದ್ದ ನಾಯಕನನ್ನು ಆಗಿನ ಕಮೀಷನರ್ ಆಗಿದ್ದ ಮಾರ್ಕಕಬ್ಬನ್. ತಮಗೆ ಸಾಮಾಂತನಾಗಿ ಇರಲು ಒಪ್ಪಿಕೊಂಡರೆ ಬಿಡುಗಡೆ ಮಾಡಿ ಅವನ ರಾಜ್ಯವನ್ನು ಅವನಿಗೆ ಹಿಂತಿರುಗಿಸುತ್ತೇವೆ ಎಂದು ಹೇಳಿದನು. ಆದರೆ ನಾಯಕ ಇದಕ್ಕೆ ಒಪ್ಪಲಿಲ್ಲ. ಅವನನ್ನು ಸೆರೆಯಿಲ್ಲಿಟ್ಟು ಗಲ್ಲಿಗೆ ಆಜ್ಞೆಮಾಡಿದರು. ಈತ ಆ ರಾತ್ರಿ ಸ್ವಸ್ಥವಾಗಿ ನಿದ್ರೆಮಾಡಿದನು. ಗಲ್ಲಿಗೆ ಏರಿಸಲು ಹೋದಾಗ ಅವರು ಇತನ ಕುತ್ತಿಗೆಗೆ ಹಾಕಿದ್ದ ನೇಣು ಕಿತ್ತು ಹೋಯಿತು. ಎರಡು ಸಲ ಹೀಗೆ ಆಯಿತು. ಆಗಾ ನಸುನಗುತ್ತ ನಾಯಕ ತನ್ನ ನಡುವಿನಲ್ಲಿ 16 ಮೊಳದ ಪಟ್ಟಿಯನ್ನು ಬಿಚ್ಚಿ ಅದನ್ನು ನೇಣು ಮಾಡಿ  ಹಾಕುವಂತೆ ಸೂಚಿಸಿದನು. ಅದೇ ಪ್ರಕಾರ ಇವನ ನಡುಪಟ್ಟಿಯನ್ನು ನೇಣುಮಾಡಿ ಇವನಿಗೆ ಗಲ್ಲಿಗೆ ಏರಿಸಿದರು.  ಈ ರೀತಿ ಸ್ವಾತಂತ್ರಕ್ಕಾಗಿ ಈತ ಪ್ರಾಣಾರ್ಪಣೆ ಮಾಡಿದ ಮೈಸೂರುಸೀಮೆಯ ಎರಡನೇ ಮಹಾನಾಯಕ. ಈ ಕಾದಂಬರಿಯಲ್ಲಿ ಇವನ ಧೀರೋದಂತ ಜೀವನದ ಚಿತ್ರಣವಿದೆ.

**(ಆ) ಹೈದರಾಲಿ ಭಾಗ –I ಭಾಗ – II**

ಹೈದರಾಲಿ ತನ್ನ ಶೌರ್ಯ, ಸಾಹಸಗಳಿಂದ ಆಗಿನ ಮೈಸೂರು ರಾಜ್ಯದ ಸರ್ವಾಧಿಕಾರಿಗಳಾಗಿದ್ದ ನಂಜರಾಜಯ್ಯ ಮತ್ತು ಇಲ್ಲಿ ಸಂಭವಿಸಿದ ಆನೇಕ ರಾಜಕೀಯ ಬೆಳವಣಿಗಳಲ್ಲಿ ರಾಜ್ಯವನ್ನು ನಡೆಸುವುದು ಮತ್ತು  ಸೈನ್ಯವನ್ನು ಹತೋಟಿಯಲ್ಲಿ ಇಡುವುದು. ಅಸಾಧ್ಯವಾದಾಗ ರಾಜರು ಈತನನ್ನು ಮಹಾಸೇನಾಧಿಪತಿಯಾಗಿ ಮಾಡಿದರು. ಇದಕ್ಕೆ ಸರ್ವಾಧಿಕಾರಿಗಳ ಮತ್ತು ದಳವಾಯಿಗಳ ಒಪ್ಪಿಗೆಯು ಇತ್ತು. ಆಕಾಲದಲ್ಲೇ ಮರಾಠಿಯವರು.

ಒಬ್ಬ ತಮ್ಮ ಕಡೆಯ ಖಂಡೆರಾಯ ಎಂಬ ಏಜೆಂಟ್‌ನ ಮೂಲಕ ಹೈದರನನ್ನು ಸೆರೆ ಹಿಡಿಯುವ ಪ್ರಯತ್ನ ಮಾಡಿದರು. ಆದರೆ ಜನ ಬೆಂಬಲ ಸೈನ್ಯದ ಬೆಂಬಲ ಮತ್ತು ದೈವಕೃಪೆ ಇದ್ದ ಹೈದರ್ ಇಲ್ಲಿಂದ ತಪ್ಪಿಸಿಕೊಂಡು. ಬೆಂಗಳೂರಿಗೆ ಹೋದನು. ಅಲ್ಲಿಂದ ತನ್ನ ಆಪ್ತ ದಳಪತಿಗಳು ಮತ್ತು ಸೈನ್ಯ ಇದರ ಸಹಾಯದಿಂದ ಮತ್ತೆ ಶ್ರೀರಂಗಪಟ್ಟಣದ ಮೇಲೆ ದಂಡೆತ್ತಿ ಬಂದು ಅದನ್ನು ವಶಪಡಿಸಿಕೊಂಡರು. ಇದಕ್ಕೆ ಸರ್ವಾಧಿಕಾರಿ ನಂಜರಾಜಯ್ಯನ ಆಶೀರ್ವಾದ ಇದ್ದಿತ್ತು. ಆ ಘಟ್ಟದಲ್ಲಿ ಹೈದರಾಲಿ ರಾಜ್ಯದ ಸೂತ್ರಗಳನ್ನು ತನ್ನ ಕೈಗೆ ತೆಗೆದುಕೊಂಡನು. ಖಂಡೆರಾಯನನ್ನು ಸೆರೆಯಲ್ಲಿಟ್ಟನು. ಆ ಕಾಲದಲ್ಲಿ ಮೈಸೂರು ರಾಜ್ಯ ಕೇವಲ 32 ಗ್ರಾಮಗಳಿಗೆ ಮಾತ್ರ ಸೀಮಿತವಾಗಿತ್ತು. ಹೊರಗಡೆಯಿಂದ ಹೈದರಾಬಾದಿನವರು ನುಗ್ಗಿ ಬಂದು ಪದೇ ಪದೇ ಕಪ್ಪ ಪಡೆಯುತ್ತಿದ್ದರು. ಹೈದರ್ ಮೊದಲು ಮರಾಠಿಯವರು ಆಕ್ರಮಿಸಿಕೊಂಡಿದ್ದ ಮೈಸೂರು ರಾಜ್ಯವನ್ನು ಅವರ ಅನೇಕ ಪ್ರದೇಶಕ್ಕೆ ಮೇಲೆ ಹಾಗೂ ಕೇಂದ್ರಗಳ ಮೇಲೆ ದಂಡೆತ್ತಿ ಹೋಗಿ ಅವರನ್ನು ಸೋಲಿಸಿ ವಶಪಡಿಸಿಕೊಂಡನು. ಈ ರೀತಿ ನಿರಂತರವಾಗಿ ಹೋರಾಡಿ ಮೈಸೂರು ರಾಜ್ಯದಲ್ಲಿ ಅವರು ಹಿಡಿದಿದ್ದ ಎಲ್ಲಾ ಪ್ರದೇಶಗಳನ್ನು ಗೆದ್ದನು. ಹಾಗೂ ಅವರನ್ನು ಕೃಷ್ಣಾನದಿಯ ಉತ್ತರದ ತನಕ ಅಟ್ಟಿಸಿಕೊಂಡು ಹೋಗಿ ಅಲ್ಲಿಂದ ಹಿಂದಕ್ಕೆ ತಳ್ಳಿದನು. ಇವನ ಸಾಹಸಗಳನ್ನು ನೋಡಿ ಹೈದರಾಬಾದಿನವರು ಇವನ ಮೇಲೆ ಯಾವುದೇ ಪ್ರಮುಖ ಕಾರ್ಯಾಚರಣೆಯನ್ನು ಮಾಡಲಿಲ್ಲ. ಆದರೆ ಕಿರುಕುಳ ಕೊಡುತ್ತಿದ್ದರು. ಅದ್ದರಿಂದ ಅವರ ಮೇಲೂ ದಂಡೆತ್ತಿ ಹೋಗಿ ಅವರು ಮೈಸೂರು ರಾಜ್ಯದಲ್ಲಿ ಗೆದ್ದಿದ್ದ ಎಲ್ಲಾ ಸ್ಥಳಗಳನ್ನು ಹಿಂದಕ್ಕೆ ಗೆದ್ದು ಕೊಂಡನು. ಹಾಗೂ ಅವರನ್ನು ಆದವನಿಯಿಂದ ಹಿಂದಕ್ಕೆ ತಳ್ಳಿದನು. ಇದೇ ಕಾಲದಲ್ಲಿ ಇವನೊಂದಿಗೆ ಆಂಗ್ಲರು ಕಾಲು ಕೆರೆದು ಯುದ್ಧಕ್ಕೆ ಬಂದರು. ಅವರನ್ನು ಎಲ್ಲಾ ಯುದ್ಧಗಳಲ್ಲೂ ಸೋಲಿಸಿ. ಅಟ್ಟಿಸಿಕೊಂಡು ಹೋಗಿ ಅವರ ಕೇಂದ್ರ ಸ್ಥಾನವಾದ ಮದ್ರಾಸಿನ ಕಡೆಗೆ ಓಡಿಸಿ ಅಲ್ಲಿದ್ದ ಅವರ ಕೋಟೆಗಳಿಗೆ ಬೆಂಕಿ ಇಟ್ಟನು. ಈ ಪ್ರದೇಶ 'ಟ್ರಿಪ್ಲಿಕೇನ್' ಎಂಬ ಪ್ರದೇಶ, ಇದೇ ಗುರುತಾಗಿ ಇದಕ್ಕೆ ಬ್ಲಾಕ್‌ಟ್ರಿಪ್ಲಿಕೇನ್ ಎನ್ನುತ್ತಾರೆ. ಅಲ್ಲಿದ್ದ ಆಂಗ್ಲರು ಹಡಗನ್ನು ಏರಿ ಪಲಾಯನ ಮಾಡಿದರು. ಇವನು ಅವನ ಮೇಲೆ ಉಂಟು ಮಾಡಿದ್ದ ಭಯ ಅವರನ್ನು ಪಿತೂರಿಗೆ ದೂಡಿತು. ಇವನ ಸೈನ್ಯದಲ್ಲಿದ್ದ ಅನೇಕ ಅಧಿಕಾರಿಗಳಿಗೆ ಲಂಚ, ಇನ್ನೂ ಮುಂತಾದ ಆಮೀಷಗಳನ್ನು ತೋರಿಸಿದನು. ಮತ್ತು ಅವರು ಇವನೊಂದಿಗೆ ರಾಜಿ ಮಾಡಿಕೊಂಡರು. ಇಲ್ಲಿಗೆ ಮೈಸೂರಿನ ಒಂದನೇ ಯುದ್ಧ ಮುಕ್ತಾಯವಾಯಿತು. ಇಷ್ಟಾದಾರೂ ಆಂಗ್ಲರು ಸಮ್ಮನಿರಲಿಲ್ಲ ಪದೇ- ಪದೇ ಇವನೊಂದಿಗೆ ಯುದ್ಧಕ್ಕೆ ಇಳಿಯುತ್ತಿದ್ದರು. ಇವನ ಒಂದು ಪ್ರಮುಖ ಕೇಂದ್ರವಾಗಿದ್ದ ಬಿದನೂರು, ಕುಂಶಿ, ಶಿವಮೊಗ್ಗ, ಗೊರುಸೊಪ್ಪೆ, ಮುಂತಾದ ಕಡೆ. ಆಕ್ರಮಣಗಳನ್ನು ಮಾಡಿಸಿದನು. ಇವರು ಮಂಗಳೂರಿನ ಕಡೆಗೆ ಪಲಾಯನಮಾಡಿ ಅಲ್ಲಿ ನಿಂತರು. ಇವರಿಗೆ ಕೊಚ್ಚಿಯಿಂದ ಸಹಾಯ

ಬರುತ್ತಿತ್ತು. ಆದ್ದರಿಂದ ಹೈದರ್ ಮಲಬಾರಿನ ಮೇಲೆ ಆಕ್ರಮಣಕ್ಕೆ ತನ್ನ ಮಗ ಟಿಪ್ಪುಸುಲ್ತಾನ್‌ನ್ನು ಕಳುಹಿಸಿ ತಾನು ಮದ್ರಾಸಿನಲ್ಲಿ ತನ್ನ ಕಾರ್ಯಾಚರಣೆಯನ್ನು ಮುಂದುವರಿಸಿದನು.ಈ ನಡುವೆ ಆತನಿಗೆ 'ಬೆನ್ನುಪಣಿ' ರೋಗ ಉಲ್ಬಣವಾಗಿ ಆತ ಮದ್ರಾಸಿನ ಹತ್ತಿರ ಇರುವ ನರಸಿಂಗರಾಯ ಪೇಟೆಯಲ್ಲಿ ಕಾಲವಾದನು. ಇಲ್ಲಿಗೆ ಹೈದರ್ ಅಲಿ ಭಾಗ 2 ಮುಕ್ತಾಯವಾಗುತ್ತದೆ.

**(ಇ) ಟಿಪು ಸುಲ್ತಾನ್** :- ಮುಂದಿನ ಯುದ್ಧದ ಹೊಣೆ ಟಿಪ್ಪುವಿನ ಮೇಲೆ ಬಿದ್ದಿತು. ಹೈದರ್ ಕಾಲವಾದಾಗ ಟಿಪ್ಪು ಮಲಬಾರಿನಲ್ಲಿದ್ದನು. ತಂದೆಯ ನಿಧನದ ವಾರ್ತೆ ಕೇಳಿ ಆತ ಶ್ರೀರಂಗಪಟ್ಟಣಕ್ಕೆ ಹಿಂದುರುಗಿ ಬಂದನು. ಹೈದರನ ಮೃತದೇಹವನ್ನು ತಾತ್ಕಾಲಿಕವಾಗಿ ಕೋಲಾರದ ಬಳಿ ಗುಪ್ತವಾಗಿ ಇರಿಸಿದ್ದರು. ಅದನ್ನು ತರಿಸಿಕೊಂಡು ಶ್ರೀರಂಗಪಟ್ಟಣದಲ್ಲಿ ಅದನ್ನು ಭೂಸ್ವಾಧೀನ ಮಾಡಲಾಯಿತು. ಮುಂದೆ ಇಲ್ಲೊಂದು ಗುಂಬಜ್ ಎಂಬ ಹೆಸರಿನಲ್ಲಿ ಸುಂದರವಾದ ಸಮಾಧಿ ಮಂದಿರವನ್ನು ಟಿಪ್ಪುಸುಲ್ತಾನ್ ಕಟ್ಟಿಸಿದನು. ಹಾಗೂ ತಂದೆ ನಿಲ್ಲಿಸಿದ್ದ ಯುದ್ಧವನ್ನು ಮುಂದುವರಿಸಿದನು. ಇಗ ಆಂಗ್ಲರು ಮಂಗಳೂರಿನಲ್ಲಿ ಸೇರಿ ಕೊಂಡಿದ್ದರು. ಅವರಿಗೆ ಬೊಂಬಾಯಿ ಮತ್ತು ತಿರುಚಿ ಕಡೆಯಿಂದ ಸಹಾಯ ಸೈನ್ಯ ಬರುತ್ತಿತ್ತು. ಇದೆಲ್ಲ ಟಿಪ್ಪುಸುಲ್ತಾನ್ ಗಮನಿಸಿದ್ದನು. ಇವನ ಮೇಲೆ ಪಿತೂರಿಗಳ ಒಂದು ಸರಮಾಲೆಯನ್ನೇ ಆಂಗ್ಲರು ಹುಟ್ಟು ಹಾಕಿದ್ದರು. ಈ ಪಿತೂರಿಗಳಲ್ಲಿ ಆತನ (1) ಅಧಿಕಾರಿಗಳು (2) ಆತನ ಸ್ವಜನರು (3) ಮೈಸೂರಿನ ರಾಜಮನೆತನದವರು. (4) ಮರಾಠೆಯವರು (5) ಹೈದರಾಬಾದಿನವರು (6) ಕೊಡಗಿನವರು ಮತ್ತು ಮಲೆಯಾಳದವರು ಸೇರಿದ್ದರು. ಟಿಪ್ಪು ಶ್ರೀರಂಗಪಟ್ಟಣದಲ್ಲಿ ತಮ್ಮ ತಂದೆಯ ಶವ ಸಂಸ್ಕಾರವನ್ನು ಮಾಡಿದ ನಂತರ ಸಮಯ ಸಾಧಿಸಿ ಅವನನ್ನು ಸೆರೆಹಿಡಿಯಬೇಕೆಂದು ಒಂದು ಪಿತೂರಿ ನಡೆಸಿದರು. ಇವರ ಮುಖ್ಯಸ್ಥ ಒಂದು ಕಾಲಕ್ಕೆ ಹೈದರನಿಗೆ ಆಪ್ತನಾಗಿದ್ದ ಒಬ್ಬ ಶಾಮಯ್ಯಂಗರ್ ಒಬ್ಬ ಅಧಿಕಾರಿ ಈ ಪಿತೂರಿಯನ್ನು ಒಬ್ಬ ಆಪ್ತ ಅಧಿಕಾರಿ ಟಿಪ್ಪುವಿಗೆ ಸಕಾಲದಲ್ಲಿ ತಿಳಿಸುವುದರಿಂದ ಆತ ಅಪಾಯದಿಂದ ಪಾರಾದನು. ಮತ್ತು ಎಲ್ಲಾ ಪಿತೂರಿಕೋರರನ್ನು ಹಿಡಿದು ಗಲ್ಲಿಗೆ ಏರಿಸಿದನು. ಇವನ ಅಧಿಕಾರಿಗಳ ಪೈಕಿ ಪ್ರಮುಖ ಅಧಿಕಾರಿಯಾಗಿದ್ದ. ದಿವಾನ ಮಿರ್‌ಸಾಧಕ್ ದಿವಾನ್ ಪೂರ್ಣಯ್ಯ. ಗುಲಾಂಅಲಿಬಾನ್ ಕೃಷ್ಣರಾವ್. ಪ್ರಮುಖರು. ಇವರ ಏಜೆಂಟರು ರಾಜ್ಯದ ಸುದ್ದಿಗಳನ್ನು ಕ್ರಮವಾಗಿ ಇಂಗ್ಲೀಷ್‌ರಿಗೆ ತಲುಪಿಸುತ್ತಿದ್ದರು. ಟಿಪ್ಪುವಿನ ರಾಜ್ಯದಲ್ಲೆಲ್ಲ ಅನೇಕ ಪ್ರಮುಖ ಸ್ಥಳಗಳಲ್ಲಿದ್ದ ಮುಸಲ್ಮಾನ ಅಧಿಕಾರಿಗಳು ಬ್ರಿಟಿಷರ ಲಂಚಕ್ಕೆ ಒಳಗಾಗಿದ್ದರು. ಈ ನಡುವೆ ಟಿಪ್ಪು ಸೈನ್ಯ ಸಮೇತ ಮಂಗಳೂರಿನ ಆಕ್ರಮಣಕ್ಕೆ ಹೊರಟನು. ಮಂಗಳೂರಿನಲ್ಲಿದ್ದ ಇಂಗ್ಲೀಷರ ಕೋಟೆಯನ್ನು ಸುತ್ತು ವರಿದು. ಅ ಕೋಟೆಯ ಮೇಲೆ ಆತ ಹೊಸದಾಗಿ ಜಾರಿಗೆ ತಂದಿದ್ದ ಕ್ಷಿಪಣಿಗಳ ಸಹಾಯದಿಂದ ದಪ್ಪ-ದಪ್ಪ ಕಲ್ಲು ಬಂಡೆಗಳನ್ನು ತೂರಿದನು. ಈ ಏಟನ್ನು ತಡೆಯಲಾರದೆ ಆಂಗ್ಲ ಸೈನ್ಯ

ತತ್ತರಿಸಿತು. ಇವರಿಗೆ ಸಮುದ್ರ ಮಾರ್ಗವಾಗಿ ಬರುತ್ತಿದ್ದ ಕೊಚ್ಚಿಯ ಸಹಾಯ ಸೈನ್ಯವನ್ನು ಸೋಲಿಸಿದನು. ಆಗ ಟಿಪ್ಪುವಿನ ಸೈನ್ಯದಲ್ಲಿದ್ದ ಮಹಮದ್ ಆಲಿ ಎಂಬ ಮಹಾಸೇನಾಧಿಪತಿ ಟಿಪ್ಪುವನ್ನು ತಾನು ಸೆರೆ ಹಿಡದು ತರುತ್ತೇನೆ. ಎಂದು ಘೋಷಿಸಿ ಕೆಲವರೊಂದಿಗೆ ಹೊರಕ್ಕೆ ನಡೆದನು. ಅವನನ್ನು ಹಿಂಬಾಲಿಸಿ ಸೆರೆ ಹಿಡಿಯುವಂತೆ ಟಿಪ್ಪು ಆದೇಶಿಸಿದನು. ಮಹಮದ್ ಆಲಿ ಇದನ್ನು ನೋಡಿ ಆತ್ಮಹತ್ಯೆ ಮಾಡಿಕೊಂಡನು. ಈ ರೀತಿ ಘಟನೆಗೆ ಕಾರಣನಾಗಿದ್ದ ಒಬ್ಬ ಖಾಸಿಂ ಅಲಿ ಎಂಬ ದಳಪತಿಯನ್ನು ಸೆರೆಹಿಡಿದು ಅವನನ್ನು ಕೊಲ್ಲಿಸಲಾಯಿತು. ಇಂಗ್ಲೀಷರು ಇವನೊಂದಿಗೆ ರಾಜಿ ಮಾಡಿಕೊಂಡರು. ಇದಕ್ಕೆ 'ಮಂಗಳೂರು ಒಪ್ಪಂದ' ಎಂದು ಹೆಸರಾಯಿತು.

ಇಲ್ಲಿಗೆ ಮೈಸೂರಿನ 2 ಯುದ್ಧ ಮುಕ್ತಾಯವಾಯಿತು. ಆದರೆ ಇಂಗ್ಲೀಷರು ಸುಮ್ಮನಾಗಲಿಲ್ಲ ಮತ್ತು ಒಪ್ಪಂದದ ಪ್ರಕಾರ ನಡೆದುಕೊಳ್ಳಲಿಲ್ಲ. ಆ ಕಾಲದಲ್ಲಿ ತನ್ನ ರಾಜ್ಯದ ಅಭಿವೃದ್ಧಿಯ ಕಡೆ ವಿಶೇಷವಾಗಿ ಗಮನ ಕೊಟ್ಟನು. ರೈತರಿಗೆ ಅನುಕೂಲವಾಗಲು ರಾಜ್ಯದಲ್ಲಿದ್ದ ಅನೇಕ ಕೆರೆ ಕಟ್ಟೆಗಳನ್ನು ದುರಸ್ಥಿ ಮಾಡಿಸಿದನು. ಇವುಗಳಲ್ಲಿ ಬಳ್ಳಾರಿಯ ಅಮಾನಿಕೆರೆ ಮತ್ತು ತೊಂಡನೂರಿನ ಕೆರೆ. ಪ್ರಮುಖವಾದವು ಈ ಕೆರೆಗಳನ್ನು ಎತ್ತರಿಸಿ ಹೆಚ್ಚು ನೀರು ಸಂಗ್ರಹವಾಗುವಂತೆ ಮಾಡಿ ಅವುಗಳ ಮೂಲಕ ಕಾಲುವೆಗಳಿಗೆ ನೀರು ಹರಿಯುವಂತೆ ಏರ್ಪಡಿಸಿದನು. ಅನೇಕ ಕಡೆ ರಸ್ತೆಗಳನ್ನು ಅಭಿವೃದ್ಧಿ ಪಡಿಸಿ ಆ ರಸ್ತೆಗಳಲ್ಲಿ ಪ್ರಯಾಣ ಮಾಡುವ ವರ್ತಕರು ಮತ್ತು ಪ್ರಯಾಣಿಕರಿಗೆ ಸೂಕ್ತವಾದ ರಕ್ಷಣೆಗಳನ್ನು ಒದಗಿಸಿ ಕೊಟ್ಟನು. ಇವನ ಕಾಲದಲ್ಲಿ ಸುಮಾರು 130 ಹಿಂದೂ. ದೇವಾಲಯಗಳಿಗೆ ದಾನ ಧರ್ಮಗಳನ್ನು ಮತ್ತು ಜಹಗೀರ್‌ಗಳನ್ನು ಕೊಟ್ಟನು. ಅ ಕಾಲದಲ್ಲಿ ಕೇವಲ 30 ಮುಸಲ್ಮಾನ ದರ್ಗಾಗಳಿಗೆ ಅನುದಾನ ನೀಡುತ್ತಿದ್ದನು. ಈತ ಶ್ರೀರಂಗಪಟ್ಟಣದ ಶ್ರೀರಂಗನಾಥ, ನಂಜನಗೂಡಿನ ನಂಜುಡೇಶ್ವರ. ಹಾಗೂ ದಕ್ಷಿಣದ ಕನ್ನಡ ಕಾರ್ಕಳದ ಆಂಜನೇಯಸ್ವಾಮಿ ಈ ದೇವರುಗಳಿಗೆ ಕ್ರಮಬದ್ಧವಾಗಿ ನಡೆದುಕೊಳ್ಳುತ್ತಿದ್ದನು. ಮರಾಠೆಯವರು. ಶೃಗೇರಿಯ ದೇವಸ್ಥಾನದ ಮೇಲೆ ಧಾಳಿ ಮಾಡಿ ಅಲ್ಲಿದ್ದ ಶಾರದಾ ದೇವಿಯ ವಿಗ್ರಹವನ್ನು ಕಿತ್ತು ಹಾಕಿ ಸ್ವಾಮಿಗಳು ಮತ್ತು ಅವರ ಶಿಷ್ಯರಿಗೆ ತೊಂದರೆ ಕೊಟ್ಟ ವಿಷಯ ಇವನ ಗಮನಕ್ಕೆ ಬಂದಾಗ ಆ ದೇವಸ್ಥಾನಕ್ಕೆ ಆಗಿದ್ದ ನಷ್ಟವನ್ನು ತುಂಬಿಕೊಟ್ಟು ಅದರ ಜೊತೆಗೆ ಅನೇಕ ಜಹಗೀರ್‌ಗಳನ್ನು, ದಾನಗಳನ್ನು ಕೊಟ್ಟು. ಶೃಂಗೇರಿಯನ್ನು ತ್ಯೆಜಿಸಬೇಕೆಂದು ತಿರ್ಮಾನಿಸಿದ್ದ ಗುರುಗಳಲ್ಲಿ ಮನವಿ ಮಾಡಿಕೊಂಡು ಅವರನ್ನು ತನ್ನ ರಾಜ್ಯದಲ್ಲಿ ಉಳಿಸಿ ಕೊಂಡನು. ಮತ್ತು ಮಠಕ್ಕೆ ಮತ್ತು ಅವರ ಆಸ್ತಿ- ಪಾಸ್ತಿಗೆ ಸೂಕ್ತ ರಕ್ಷಣೆ ಕೊಡಲು ಆ ಪ್ರದೇಶದಲ್ಲಿದ್ದ ತನ್ನ ಅಧಿಕಾರಿಗಳಿಗೆ ಸೂಚಿಸಿದನು. ಈತ ಮೇಲುಕೋಟೆಯ ವೈಷ್ಣವರ ನಡುವೆ ಉಂಟಾಗಿದ್ದ ಒಂದು ವ್ಯಾಜ್ಯದಲ್ಲಿ ತಿರ್ಮಾನ ಕೊಟ್ಟಿದ್ದಾನೆ. ಈ ತಿರ್ಮಾನದ ಒಂದು ಪ್ರತಿ ಮೈಸೂರಿನ ಪರಕಾಳ ಮಠದಲ್ಲಿ ತೂಗು ಹಾಕಿದ್ದಾರೆ. ತನ್ನ ರಾಜ್ಯದ ಪ್ರಜೆಗಳ ಸುಖಕ್ಕೆ ಬೇಕಾಗದ ಎಲ್ಲಾ

ಸೌಕರ್ಯಗಳನ್ನು ಮಾಡುತ್ತಿದ್ದನು. ಇಷ್ಟಾದರೂ ಇವನಿಗೆ ಇವನ ಬಂಧುಗಳು, ಅಧಿಕಾರಿಗಳು, ರಾಜಕುಟುಂಬದವರು, ಕಿರುಕುಳ ಕೊಡುವುದನ್ನು ನಿಲ್ಲಿಸಲಿಲ್ಲ. ಇತ ತನ್ನ ಸೈನ್ಯವನ್ನು ಅಧುನಿಕ ರೀತಿಯಲ್ಲಿ ತರಬೇತುಗೊಳಿಸಬೇಕೆಂದು ತನಗೆ ವಿಶೇಷ ಸಹಾಯ ಕೊಡಬೇಕೆಂದು ಕೇಳುವುದಕ್ಕಾಗಿ ಪುದುಚೇರಿಯಲ್ಲಿದ್ದ ಫ್ರೆಂಚ್ ಅಧಿಕಾರಿಗಳನ್ನು ಭೇಟಿ ಮಾಡುವ ಸಲುವಾಗಿ ಅಲ್ಲಿಗೆ ಹೋಗಿದ್ದನು. ಈತನು ಊರಿನಲ್ಲಿ ಇಲ್ಲದ ಈ ಸಮಯ ಬ್ರಿಟಿಷರು ಬೆಂಗಳೂರಿನ ಮೇಲೆ ಧಾಳಿ ಮಾಡಿದರು. ಆಗ ಮೈಸೂರು ಸೈನ್ಯದ ಅಧಿಕಾರಿಗಳಲ್ಲಿ ಕೆಲವರು ದಿವಾನ್ ಕೃಷ್ಣರಾಯನ ಪಿತೂರಿಗೆ ಒಳಗಾಗಿ ಬೆಂಗಳೂರು ಕೋಟೆಯನ್ನು ಬ್ರಿಟಿಷರಿಗೆ ಒಪ್ಪಿಸಿದರು. ಅಲ್ಲಿದ್ದ ಬಹಳಷ್ಟು ಸಾಮಾಗ್ರಿ ಇಂಗ್ಲೀಷರ ವಶವಾಯಿತು. ಈ ರೀತಿ ಬೆಂಗಳೂರು ವಶವಾದ ಮೇಲೆ ಆಂಗ್ಲರು ಶ್ರೀರಂಗಪಟ್ಟಣದ ಮೇಲೆ ನಡೆದರು. ಟಿಪ್ಪು ಪುದುಚೇರಿಯಿಂದ ಹಿಂದಿರುಗುವ ಹೊತ್ತಿಗೆ ಈ ಅನಾಹುತಗಳು ಜರುಗಿದ್ದವು. ಶ್ರೀರಂಗಪಟ್ಟಣದಲ್ಲಿ ನಡೆದ ಮೊದಲ ಸುತ್ತಿನ ಹೋರಾಟದಲ್ಲಿ ಬ್ರಿಟಿಷ್ ಸೈನ್ಯ ಸೋತು ಕನ್ನಂಬಾಡಿಯ ಕಡೆಗೆ ಪಲಾಯನ ಮಾಡಿತು. ಆಗ ಅವರಿಗೆ ತಿನ್ನಲು ಆಹಾರದ ಕೊರತೆಯಾಗಿತ್ತು. ಅನೇಕ ಪ್ರಾಣಿಗಳು ಮೇವು ಇಲ್ಲದೆ ಸತ್ತವು. ಟಿಪ್ಪು ಆ ಸಮಯದಲ್ಲಿ ಅವರ ಈ ದರಿದ್ರ ಸ್ಥಿತಿಯಲ್ಲಿ ಅವರ ಮೇಲೆ ಆಕ್ರಮಣ ಮಾಡಲಿಲ್ಲ, ಆತ ಆ ಸೈನ್ಯಕ್ಕೆ ಉದಾರವಾಗಿ ಆಹಾರ ಕಳುಹಿಸಲು ಪ್ರಯತ್ನಿಸಿದ, ಆದರೆ ಆಂಗ್ಲರು ಅದನ್ನು ಒಪ್ಪಲಿಲ್ಲ. ಅವರು ಕನ್ನಂಬಾಡಿ ತಲುಪುವ ಹೊತ್ತಿಗೆ ಉತ್ತರದಿಂದ ಮರಾಠೆಯವರ ಬೆಂಬಲದ ಸೈನ್ಯ ಬಂದಿತು. ಬೆಂಗಳೂರಿನ ಪತನಕ್ಕೆ ಕಾರಣನಾಗಿದ್ದ ಕೃಷ್ಣರಾಯ ಮತ್ತು ಅವನ ಸಹೋದರನ್ನು ಹಿಡಿದು ಗಲ್ಲಿಗೆ ಏರಿಸಲಾಯಿತು. ಇಷ್ಟು ಹೊತ್ತಿಗೆ ಆಂಗ್ಲರ ಪಿತೂರಿ ಕೋರರು ಹೆಚ್ಚಿದರು. ಟಿಪ್ಪು ಊರಿನಲಿಲ್ಲದ ಸಮಯದಲ್ಲಿ ಅವನ ಸೈನಿಕರಿಗೆಲ್ಲ ದುಡ್ಡು ಕೊಟ್ಟು ಕಳುಹಿಸಿ ಬಿಟ್ಟರು. ಕೋಟೆಯ ಮೇಲಿದ್ದ ಫಿರಂಗಿಗಳನ್ನು ಕೆಳಕ್ಕೆ ಇಳಿಸಿದರು. ಮದ್ದಿಗೆ ಮಣ್ಣು, ಸಗಣಿಗಳನ್ನು ಬೆರಸಿದರು. ಈ ಪಿತೂರಿಗಳಿಗೆ ಮುಖ್ಯ ಕಾರಣ ಗುಲಾಂ ಅಲಿಖಾನ್ ಎಂಬ ಒಬ್ಬ ಮಂತ್ರಿ, ಮೀರ್‌ಸಾದಕನನ್ನು ಹೈದರಾಬಾದಿನವರು ಚಾಡಿ ಹೇಳಿ ಆತನಿಗೆ ಯುದ್ಧದ ನಂತರ ಗುರಂಮಕೊಂಡೆಯ ಜಾಹಗೀರ್‌ನ್ನು ಕೊಡಿಸುವ ವಾಗ್ದಾನ ಮಾಡಿದರು. ಇದಕ್ಕೆ ಒಪ್ಪಿಕೊಂಡ ಮಿರಸಾದಕ್ ಶ್ರೀರಂಗಪಟ್ಟಣ ಕೋಟೆಯ ಪೂರ್ವದ್ವಾರ ಮತ್ತು ಉತ್ತರದ್ವಾರದ ಬಾಗಿಲುಗಳಲ್ಲಿ ಕಾವಲಿದ್ಧ ತನ್ನ ಜನರಿಗೆ ಹೇಳಿ ಬಾಗಿಲುಗಳನ್ನು ತೆರೆಸಿದನು. ಹಾಗೂ ಟಿಪ್ಪುವಿನ ನಿಷ್ಟಾವಂತ ದಳಪತಿಗಳಾದ ಸೈಯದ್‌ಗಫಾರ್ ಮತ್ತು ಶಿವಾಜಿರಾವ್, ಎಂಬುವರನ್ನು ತನ್ನ ಸೈನಿಕರಿಂದಲೇ ಕೊಲ್ಲಿಸಿದನು. ಟಿಪ್ಪುವಿಗೆ ಅತಿ ನಿಷ್ಟಾವಂತರಾಗಿದ್ಧ ಈ ಸೇನಾಪತಿಗಳ ಸಾವು ಅಘಾತಕಾರಿಯಾಯಿತು. ಆಗ ಆತ ಕೋಟೆಯ ಉತ್ತರ ಭಾಗದಲ್ಲಿ ಹೋರಾಡುತ್ತಿದ್ದನು. ಪೂರ್ಣಯ್ಯ ಟಿಪ್ಪುವಿನ ಸೈನಿಕರಿಗೆ ಸಂಬಳ. ಬಟವಾಡೆ. ಮಾಡುತ್ತೇನೆಂದು ಹೇಳಿ ಕಳುಹಿಸಿದನು. ಬಹಳಷ್ಟು ಸೈನಿಕರು ಸಂಬಳ ಪಡೆಯಲು ಈಗಿನ ದೊಡ್ಡ ಮಸೀದಿಯ ಮುಂಭಾಗಕ್ಕೆ ಬಂದರು. ಅದೇ ಸಮಯದಲ್ಲಿ

ಕೋಟೆಯಿಂದ ಹೊರಬರಲು ಪ್ರಯತ್ನಿಸಿದ ಟಿಪ್ಪುವಿಗೆ ಹೊರಕ್ಕೆ ಬರದಂತೆ ಅಲ್ಲಿ ಕಾವಲಿದ್ದ ಮಿರ್‌ದಾದಕ್‌ನ ತಮ್ಮ ಮೀರ್‌ನೈಯಿಮ್ ಎಂಬಾತ ಬಾಗಿಲುನ್ನು ಹಾಕಿದನು. ಇಂಗ್ಲೀಷ ಸೈನ್ಯ ಪೂರ್ವದ ಕಡೆಯಿಂದ ವಾಯುವ್ಯದ ಕಡೆಯಿಂದ ನುಗ್ಗಿ ಬಂದು ಟಿಪ್ಪುವಿನನ್ನು ಮುತ್ತಿಕೊಂಡಿತು. ಆಗ ನಡೆದ ಹೋರಾಟದಲ್ಲಿ ಟಿಪ್ಪು ಗುಂಡಿನ ದಾಳಿಗೆ ಗುರಿಯಾಗಿ ಪ್ರಾಣಾರ್ಪಣೆ ಮಡಿದನು. ಇಲ್ಲಿಗೆ ಟಿಪ್ಪುಸುಲ್ತಾನ್ ಕಾದಂಬರಿ ಮುಕ್ತಾಯವಾಗುತ್ತದೆ. ಮೂರು ಕಾದಂಬರಿಗಳಗೂ ಶ್ರೀರಂಗಪಟ್ಟವೇ ಕೇಂದ್ರ ಹಾಗೂ ಇದು ಮಂಡ್ಯ ಜಿಲ್ಲೆಯಲ್ಲಿದೆ.

**(ಈ) ರಾಜ ಒಡೆಯರು**

17 ನೇ ಶತಮಾನದ ಪ್ರಾರಂಭದಲ್ಲಿ ಈಗಿನ ಮೈಸೂರು ಒಡೆಯರು ಇಗ ಮೈಸೂರುನಗರ ಇರುವ ಪ್ರದೇಶದಲ್ಲಿ ಹಿಂದೆ 'ಪುರುಗೆರೆ' ಎಂಬ ಒಂದು ಹಳ್ಳಿಯಾಗಿತ್ತು. ಅಲ್ಲಿ ಅದಕ್ಕೆ ಸೇರಿದ ಕೆಲವು ಹಳ್ಳಿಗಳ ಮೇಲೆ ಆಡಳಿತ ನಡೆಸುತ್ತಿದ್ದರು. ಇವರು ವಿಜಯನಗರದ ಸಾಮಾಂತರಾಗಿದ್ದರು.

ಹಿರಿಯ ಬೆಟ್ಟದ ಚಾಮರಾಜ ಒಡೆಯರಿಗೆ ಮೂರುಜನ ಮಕ್ಕಳು. ತಿಮ್ಮರಾಜ, ಕೃಷ್ಣರಾಜ, ಚಾಮರಾಜ, ಹಿರಿಯಚಾಮರಾಜರು ತಮ್ಮ ಈ ಮೂರು ಮಕ್ಕಳಗೆ ತಿಮ್ಮರಾಜನಿಗೆ, ಹೆಮ್ಮನಹಳ್ಳಿ, ಕೃಷ್ಣರಾಜನಿಗೆ ಕೆಂಬಾಳು, ಚಾಮರಾಜನಿಗೆ ಮೈಸೂರು ಹಾಗೂ ಇದಕ್ಕೆ ಸೇರಿದ ಹಳ್ಳಿಗಳನ್ನು ಹಂಚಿಕೊಟ್ಟಿದ್ದರು. ಹಿರಿಯವನಾದ ತಿಮ್ಮರಾಜ ಮಕ್ಕಳಿಲ್ಲದೇ ಮೃತಪಟ್ಟು ಆತ. ತನ್ನ ಉತ್ತಾರಾಧಿಕಾರಿಯಾಗಿ . ೩ನೇಯ ಚಾಮರಾಜನನ್ನು ನೇಮಿಸಿದನು. ತಂದೆ ಸತ್ತ ಮೇಲೆ ಈ ಚಾಮರಾಜನು ರಾಜನಾದನು. ಈತನಿಗೆ ಇಬ್ಬರು ಪತ್ನಿಯರು ಹಿರಿಯ ದೇವರಾಜಮ್ಮಣ್ಣಿ ಮತ್ತು ಕಿರಿಯ ದೇವರಾಜಮ್ಮಣ್ಣಿ ಇವರಲ್ಲಿ ಚಾಮರಾಜನಿಗೆ ಮೊದಲನೆ ಪತ್ನಿಯಲ್ಲಿ ರಾಜಒಡೆಯ ಮತ್ತು ಚಾಮರಾಜ ಒಡೆಯ ಎಂಬ ಇಬ್ಬರು ಮಕ್ಕಳು. ಎರಡನೇ ಪತ್ನಿಯಲ್ಲಿ ದೇವರಾಜ ಮತ್ತು ಚೆನ್ನರಾಜ ಎಂಬ ಇಬ್ಬರು ಮಕ್ಕಳು ಈ ಹೊತ್ತಿಗೆ ಹಿರಿಯ ಚಾಮರಾಜರ ಮಗ ಕೆಂಬಾಳಿನ ಕೃಷ್ಣರಾಜನು ಗತಿಸಿದ್ದನು. ಮೂರನೆ ಮಗನಾದ ಚಾಮರಾಜರು ಸತ್ತ ಮೇಲೆ ಅವರ ಹೆಂಡತಿ ಹಿರಿಯ ದೇವರಾಜಮ್ಮಣ್ಣಿಯು ಕಾಲವಾದರು. ಆಗ ರಾಜ ಮಾತೆಯಾಗಿ ಕಿರಿಯ ದೇವರಾಜಮ್ಮಣ್ಣಿ ರಾಜ್ಯ ಸೂತ್ರಗಳನ್ನು ಹಿಡಿದರು ರಾಜ್ಯಕ್ಕೇ ಉತ್ತರಾಧಿಕಾರಿಯಾಗಿ ವಾವೆಯಲ್ಲಿ ಹಿರಿಯನಾಗಿದ್ದ ಬೆಟ್ಟದ ಒಡೆಯನನ್ನು ರಾಜನನ್ನಾಗಿ ಮಾಡಿದರು. ಆದರೆ ಇವನು ತೀರ ಸೌಮ್ಯ ಸ್ವಾಭಾವದ ವ್ಯಕ್ತಿ, ಹೀಗಾಗಿ ಆಡಳಿತ ನಡೆಸುವ ಸಾಮರ್ಥ್ಯ ಈತನಿಗೆ ಇರಲಿಲ್ಲ ಶ್ರೀರಂಗಪಟ್ಟಣದಲ್ಲಿದ್ದ ವಿಜಯನಗರದ ಮಾಂಡಲಿಕರಿಗೆ ಸಲ್ಲಿಸಬೇಕಾದ ಕಪ್ಪದ ಹಣ ಬಾಕಿಯಾಗಿತ್ತು. ಅವರು ಬಾಕಿ ವಸೂಲಿನಾಗಿ ಮೈಸೂರನ್ನು ವಶಪಡಿಸಿಕೊಳ್ಳವ ಗುರಿ ಇಟ್ಟು ಕೊಂಡಿದ್ದರು. ಇದರಿಂದ ಮೈಸೂರಿನಲ್ಲಿ ಆನಾಯಕ ಸ್ಥಿತಿ

ಏರ್ಪಟ್ಟಿತ್ತು. ಪ್ರಜೆಗಳು. ಬೆಟ್ಟದ ಒಡೆಯನ ಬದಲಾಗಿ ಬೇರೆ ರಾಜನನ್ನು ಆರಿಸಬೇಕೆಂದು ರಾಜಮಾತೆಯಲ್ಲಿ ಮನವಿ ಮಾಡಿಕೊಂಡರು. ಆಗ ಅವರ ಮಾತಿಗೆ ಬೆಲೆಕೊಟ್ಟು ತನ್ನ ಔರಸಪುತ್ರನಾದ ದಕ್ಷನಾದ ರಾಜ ಒಡೆಯನನ್ನು ರಾಜನನ್ನಾಗಿ ಆರಿಸಿದರು. ಇದಕ್ಕೆ ಹಿಂದಿನ ರಾಜ ಬೆಟ್ಟದ ಒಡೆಯ ಸಮ್ಮತಿಸಿದನು. ರಾಜ ಒಡೆಯ ರಾಜನಾದ ಮೇಲೆ ಪ್ರಜೆಗಳ ಸಹಕಾರದಿಂದ ಶ್ರೀರಂಗಪಟ್ಟಣದವರಿಗೆ ಕೊಡಬೇಕಾದ ಕಪ್ಪವನ್ನು ಸಲ್ಲಿಸಿದನು. ಹಾಗೂ ತನಗೆ ಕಿರುಕುಳ ಕೊಡುತ್ತಿದ್ದ ತಲಕಾಡು ನಂಜರಾಜಯ್ಯ, ಕನ್ನಂಬಾಡಿ. ಗೋಪಾರಾಜಯ್ಯ,ನಾಗಮಂಗಲದ ಚೆನ್ನಯ್ಯ, ಹದಿನಾಡಿನ ಶ್ರೀಕಂಠರಾಜ, ಮುಂತಾದ ಸುತ್ತಲಿನ ಪಾಳೆಗಾರರ ಮೇಲೆ ಯುದ್ಧಗಳನ್ನು ಮಾಡಿ. ಮೈಸೂರು ರಾಜ್ಯವನ್ನು ನಾಲ್ಕು ಕಡೆ ವಿಸ್ತರಿಸಿದನು. ಮತ್ತು ದಕ್ಷವಾದ ಹಾಗೂ ಪ್ರಮಾಣಿಕವಾದ ಸೇವೆ ಸಲ್ಲಿಸಿ ಪ್ರಜೆಗಳ ಅನುರಾಗಕ್ಕೆ ಪಾತ್ರನಾದನು. ಈ ಸಮಯದಲ್ಲಿ ಪೆನುಗೊಂಡೆಯಲ್ಲಿ ವಿಜಯನಗರದ ವೆಂಕಟಪತಿರಾಯ ರಾಜನಾಗಿದ್ದನು. ಆತನಿಗೆ ಮಕ್ಕಳಿರಲಿಲ್ಲ. ಆದುದ್ದರಿಂದ ತನ್ನ ಅಣ್ಣರಾಮರಾಯನ ಎರಡನೇ ಮಗ ಶ್ರೀರಂಗನನ್ನು ದತ್ತುವಾಗಿ ಪಡೆದು ಆತನನ್ನು ಪೆನುಗೊಂಡೆಯಲ್ಲಿ ಸಾಕಿಕೊಂಡಿದ್ದನು. ಶ್ರೀರಂಗಪಟ್ಟಣದಲ್ಲಿ ಮಾಂಡಲಿಕನಾಗಿ ರಾಮರಾಯನ ಹಿರಿಯ ಮಗ ತಿರುಮಲರಾಯ ಆಡಳಿತ ನಡೆಸುತ್ತಿದ್ದನು. ಆಗ ಸೀಮೆಯ ಪಾಳೆಗಾರರೆಲ್ಲ ಸೇರಿ ಈತನನ್ನು ಎತ್ತಿ ಕಟ್ಟಿ ಇವನಿಂದ ಮೈಸೂರಿನ ಮೇಲೆ ಧಾಳಿ ಮಾಡಿದರು. ಅ ಧಾಳಿಯಲ್ಲಿ ರಾಜಒಡೆಯ ಮತ್ತು ಆತನ ತಮ್ಮಂದಿರು ಅತಿವಿಚಕ್ಷಣೆಯಿಂದ ಹೋರಾಟ ಮಾಡಿದರು ಈ ಯುದ್ಧದಲ್ಲಿ ಚೆನ್ನರಾಜ ಗಾಯಗೊಂಡನು. ಯುದ್ಧದಲ್ಲಿ ರಾಜ ಒಡೆಯನಿಗೆ ಜಯವಾಯಿತು. ಆ ನಂತರ ಮತ್ತೆ ಈ ಸಾಮಾಂತರು ಒಂದೆರಡು ಬಾರಿ ರಾಜ ಒಡೆಯನ ಮೇಲೆ ದಂಡೆತ್ತಿ ಬಂದು ಸೋತರು. ಕೊನೆಯ ಬಾರಿ ಇವೆರೆಲ್ಲ ಒಟ್ಟುಗೂಡಿ ಕಾವೇರಿ ನದಿಯ ದಕ್ಷಿಣ ದಂಡೆಯಲ್ಲಿ ರಾಜ ಒಡೆಯನ ಮೇಲೆ ಯುದ್ಧ ಮಾಡಿದರು. ಈ ಯಾವ ಯುದ್ಧಗಳಲ್ಲೂ ರಾಜ ಒಡೆಯ ಸ್ವತಃ ಭಾಗವಹಿಸಲಿಲ್ಲ. ಯುದ್ಧದ ಸಂಪೂರ್ಣ ಜವಾದ್ದಾರಿ ಆತ ತನ್ನ ಮಕ್ಕಳಿಗೆ ಬಿಟ್ಟುಕೊಟ್ಟಿದ್ದನು. ಇಲ್ಲಿ ನಡೆದ ಯುದ್ಧದಲ್ಲಿ ರಾಜ ಒಡೆಯರ ಪಕ್ಷ ಗೆದ್ದಿತು. ಸಾಮಂತರು ದಿಕ್ಕಾ ಪಾಲಾಗಿ ಪಲಾಯನ ಮಾಡಿದರು. ತಿರುಮಲರಾಯ ಒಂಟಿಯಾಗಿ ಉಳಿದ. ಇದರಿಂದ ಕೆಂಗೆಟ್ಟು ನಿಲಾಶನಾಗಿ ತಿರುಮಲಾರಾಯ ತಲಕಾಡಿಗೆ ಹೋರಟು ಹೋದ. ಈ ಸುದ್ಧಿ ಮೈಸೂರಿನಲ್ಲಿದ್ದ ರಾಜ ಒಡೆಯರಿಗೆ ಅವರ ಮಕ್ಕಳು ತಲುಪಿಸಿದರು. ಅ ಮೇಲೆ ಪತಿ ಇಲ್ಲದೇ ಒಂಟಿಯಾಗಿ ನಿಸ್ಸಾಹಾಯಕಳಾಗಿ ಉಳಿದ ಮಾಂಡಲೀಕರ ಪತ್ನಿ ರಂಗಮ್ಮನವರಿಗೆ ಹೇಳಿ ಕಳುಹಿಸಿ ತಾವು ಸೂಕ್ತ ಸಿಬ್ಬಂದಿಯೊಂದಿಗೆ ಅವರನ್ನು ಅವರ ಪತಿಯಾದ ತಿರುಮಲಾರಾಯ ಬಳಿಗೆ ತಲಾಕಾಡಿಗೆ ಕಳುಹಿಸಿ ಕೊಡುತ್ತೇವೆ. ಎಂದು ಹೇಳಿ ಕಳುಹಿಸಿದರು. ಅದರಂತೆ ರಂಗಮ್ಮನವರು ಪ್ರಯಾಣಕ್ಕೆ ಸಿದ್ಧರಾದಾಗ ಅವರನ್ನು

ಸೂಕ್ತ ರಕ್ಷಣೆಯಲ್ಲಿ ತಲಾಕಾಡಿಗೆ ತಲುಪಿಸಿದರು. ತಲಾಕಾಡಿನಲ್ಲಿ ತಿರುಮಲರಾಯ ರೋಗಕ್ಕೆ ತುತ್ತಾಗಿ ನರಳಿ ದಿವಗಂತನಾದನು. ಇತನ ಸಂಸ್ಕಾರವನ್ನು ನೆರವೇರಿಸಿದ ಮೇಲೆ ರಂಗಮ್ಮ ತಾನು ಕೂಡ ಕಾವೇರಿ ಬಿದ್ದು ಆತ್ಮ ಹತ್ಯೆ ಮಾಡಿಕೊಂಡಳು.

ಈ ಎಲ್ಲಾ ಸುದ್ಧಿಗಳು ವಿಜಯನಗರದ ಅರಸನಾಗಿದ್ದ ವೆಂಕಟಪತಿರಾಯನಿಗೆ ದೂತರ ಮೂಲಕ ರಾಜ ಒಡೆಯರು ತಲುಪಿಸಿದರು. ಆಗ ವೆಂಕಟಪತಿರಾಯ. ಇವರನ್ನು ದಕ್ಷಿಣ ಭಾಗದ ತನ್ನ ಸಾಮ್ರಾಜ್ಯದ ಪ್ರತಿನಿಧಿ ಎಂದು ಅಂಗಿಕರಿಸಿ ಅದಕ್ಕಾಗಿ ಒಂದು ಸನದನ್ನು ಬರೆದುಕೊಟ್ಟು ಈ ಭಾಗದ ಆಡಳಿತ ಮತ್ತು ಉಸ್ತುವಾರಿಯನ್ನು ರಾಜ ಒಡೆಯರಿಗೆ ವಹಿಸಿದನು. ಆದರೆ ನಂತರ ರಾಜ ಒಡೆಯರು ಮೈಸೂರಿನಿಂದ ಶ್ರೀರಂಗಪಟ್ಟಣಕ್ಕೆ ಬಂದು ಅಲ್ಲಿ ರಾಜರಾಗಿ ಅಧಿಕಾರ ವಹಿಸಿಕೊಂಡರು. ಹೀಗೆ ವಿಜಯನಗಗರದವರಿಂದ ಕ್ರಮಬದ್ಧವಾಗಿ ಸನದು ಪಡೆದು ಮೈಸೂರು ಒಡೆಯರ ಆಳ್ವಿಕೆಗೆ ಸ್ಥಿರವಾದ ಬುನಾದಿ ಹಾಕಿದ ಕೀರ್ತಿಯು ರಾಜ ಒಡೆಯರಿಗೆ ಸಲ್ಲುತ್ತದೆ.

ಇವರು ಮಹಾದೈವಭಕ್ತರು. ಜನಾನುರಾಯಿ ಸಾಹಸಿ ಪ್ರಮಾಣಿಕರು. ಸದಾಕಾಲ ರಾಜ್ಯದ ಹಿತವನ್ನು ಗಮನದಲ್ಲಿ ಇಟ್ಟುಕೊಂಡು ಅರಸ. ಅದ್ದರಿಂದ ಮೈಸೂರು ಆ ಒಡೆಯರ ಅಳ್ವಕೆಗೆ ಇವರ ಈ ಶ್ರಮ ಶೌರ್ಯ. ಸಾಹಸ. ದೈವಭಕ್ತಿಗಳು ಮುಖ್ಯ ಕಾರಣವಾಗಿವೆ. ಇವು ಈ ಕಾದಂಬರಿಯಲ್ಲಿ ವಿಶೇಷವಾಗಿ ಚಿತ್ರಿತವಾಗಿವೆ.ಇವರ

**(ಆ) ಸಾಮಾಜಿಕ ಕಾದಂಬರಿಗಳು :** 1 ಕತ್ತರಿಯ ನಡುವೆ 2. ಯಾರಿಗೆ ಯಾರು ಇಲ್ಲ. 3. ಮರುಹುಟ್ಟು 4-ರಕ್ತದರುಚಿ 5)ಸೂಲಂಗಿ- ಎಂಬ ಸಾಮಾಜಿಕ ಕಾದಂಬರಿಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಈಗ ಮರುಹುಟ್ಟು ಕಾದಂಬರಿ ಪ್ರಕಟವಾಗಿದೆ. ಕತ್ತರಿಯ ನಡುವೆ ಮತ್ತು ರಕ್ತದ ರುಚಿ. ಹಸ್ತಪ್ರತಿ ರೂಪದಲ್ಲಿವೆ. ಸೂಲಂಗಿ ಮತ್ತು ಯಾರಿಗೆ ಯಾರು ಇಲ್ಲ ಅಪೂರ್ಣವಾಗಿವೆ.

**ಮರುಹುಟ್ಟು** :ಇದು ಗ್ರಾಮಾಂತರಕ್ಕೆ ಸೇರಿದ ಒಬ್ಬ ರೈತ ಯುವಕ ಜಯಗೋಪಾಲನಿಗೆ ಆತನ ಸಹಪಾಠಿಗಳು. ಸ್ನೇಹಿತರು ವೈಯುಕ್ತಿಕ ಕಾರಣಗಳಿಂದ ದ್ವೇಷ ಬೆಳಸಿಕೊಂಡು ಆತನನ್ನು ತಪ್ಪು ದಾರಿಗೆ ಎಳೆದು ಅವನ ಸಂಸಾರದಲ್ಲಿ ಅಸಮಾಧಾನವನ್ನು ಗೊಂದಲವನ್ನು ಹುಟ್ಟು ಹಾಕಿದ ಕಾರಣ ಗೋಪಾಲ ಜಿಗುಪ್ಸೆಗೊಂಡು ತನ್ನ ತಾಯಿ ಮತ್ತು ತಂದೆ ಇವರ ಹಾಗೂ ತಾನು ಪ್ರೇಮಿಸಿದ ಸೋದರ ಮಾವನ ಮಗಳು ಮತ್ತು ಅವರ ಕುಟುಂಬದವರ ಬೇಸರಕ್ಕೆ ಕಾರಣವಾದ್ದರಿಂದ ತೀರ ಹತಾಶನಾಗಿ ಪ್ರಾಣವನ್ನು ಕಳೆದುಕೊಳ್ಳಬೇಕೆಂದು ನಿರ್ಧರಿಸಿ ಕಾವೇರಿಯ ಭರ ಚುಕ್ಕಿ ಮಡುವಿನ ಬಳಿ ಒಂದು ರಾತ್ರಿ ಬಂದು ನಿಂತು ಕೆಳಗೆ ಹರಿಯುತ್ತಿದ್ದ ಕಾವೇರಿ ನದಿಯನ್ನು ದಿಟ್ಟಿಸಿ ನೋಡುತ್ತ ನಿಂತಿರುತ್ತಾನೆ. ಆಗ ಆತನ ಹಿಂದಿನಿಂದ ಒಂದು ಕೈ ಭುಜವನ್ನು ಸವಾರಿ ಅವನನ್ನು "ಏನು ಮಾಡುತ್ತಿದ್ದಿಯೇ" ಎಂದು ಪ್ರಶ್ನಿಸಿ ಸಂಭಾಷಣೆಗೆ

ತೊಡಗುತ್ತದೆ. ಈ ಕೈ ಅ ಸುತ್ತಿನಲ್ಲಿ ಸ್ವಾಮಿಗಳೆಂದು, ಪಂಡಿತರೆಂದು, ಹೆಸರುವಾಸಿಯಾಗಿದ್ದ, ಸ್ವಾಮಿಮುಕುಂದಚಾರ್ಯರದು. ಅವರು ಪಕ್ಕದ ಕೊಳ್ಳೆಗಾಲದ ವಾಸಿಯಾಗಿದ್ದು ವರ್ಷಕ್ಕೆ ಎರಡು ಮೂರು ಬಾರಿ ತಮ್ಮ ಶಿಷ್ಯರೊಂದಿಗೆ ಗಿಡ ಮೂಲಿಕೆಗಳನ್ನು ಸಂಗ್ರಹಿಸುವುದಕ್ಕಾಗಿ ಈ ಕಡೆಗೆ ಬರುತ್ತಿದ್ದ ವಾಡಿಕೆ ಆ ದಿನವು ಅವರು ಹಾಗೆಯೇ ಒಂದು ಶಿವನ ಸಮುದ್ರ ಊರಿನ ಜಗನ್ಮೋಹನ ರಂಗನಾಥ ಸ್ವಾಮಿಯ ದೇವಾಲಯದಲ್ಲಿ ಮಲಗಿದ್ದಾಗ ಅವರಿಗೆ ಈ ಕಡೆ ಹೋಗುವಂತೆ ಒಂದು ಅವ್ಯಕ್ತವಾಣಿ ಸೂಚಿಸುತ್ತದೆ. ಅದನ್ನು ಅನುಲಕ್ಷಿಸಿ ಬಂದ ಅಚಾರ್ಯರ ಕಣ್ಣಿಗೆ ಗೋಪಾಲ ಭರಚುಕ್ಕಿಯ ಹತ್ತಿರ ಕಂಡು ಮಾತಿನಲ್ಲಿ ತೊಡಗಿಸಿ ರಮಿಸಿ ಅತನನ್ನು ತಮ್ಮ ಜೊತೆಯಲ್ಲಿ ಕರೆದು ಕೊಂಡು ಹೋಗುತ್ತಾರೆ. ಮತ್ತು ಅವನ ಈ ಸ್ಥಿತಿಗೆ ಏನು ಕಾರಣ ಎಂದು ಕೇಳುತ್ತಾರೆ. ಗೋಪಾಲ ತನ್ನ ವೃತ್ತಾಂತವನ್ನು ಹಾಗೂ ಇದಕ್ಕೆ ಕಾರಣರಾದ ತನ್ನ ಸ್ನೇಹಿತರ ಮೋಸಗಳನ್ನು ವಿವರಿಸುತ್ತಾನೆ. ಆಗ ಸ್ವಾಮಿಗಳು ಆತ್ಮ ಹತ್ಯೆಯಿಂದ ಏನನ್ನು ಸಾಧಿಸಲು ಆಗುವುದಿಲ್ಲ ನೀನು ಬದುಕಬೇಕು ಮತ್ತು ನಿನಗೆ ಮೋಸ ಮಾಡಿದ ಅ ಸ್ನೇಹಿತರ ಮೇಲೆ ಸೇಡನ್ನು ತೀರಿಸಿಕೊಳ್ಳಬೇಕು ಮತ್ತು ನಿನಗೋಸ್ಕರ ಹಗಲಿರುಳು ದುಃಖಿಸುತ್ತಿರುವ ನಿನ್ನ ತಾಯಿಗೂ ಮತ್ತು ದಿವಂಗತರಾದ ನಿಮ್ಮ ತಂದೆಯ ಆತ್ಮಕ್ಕೂ ತೃಪ್ತಿಯಾಗುವಂತೆ ಬದುಕಿ ಬಾಳಬೇಕು ಎಂದು ಹಾಗೂ ಆತನ ಈ ಪ್ರಯತ್ನಗಳಲ್ಲಿ ತಾವು ಸಂಪೂರ್ಣವಾಗಿ ಸಹಕಾರ ನೀಡುತ್ತೇವೆ. ಎಂದು ವಾಗ್ದಾನ ಮಾಡುತ್ತಾರೆ. ಅವರ ಮಾತಿನ ಪ್ರಕಾರ ಗೋಪಾಲ ಅವರ ಜೊತೆ ಕೊಳ್ಳೆಗಾಲಕ್ಕೆ ಹೋಗುತ್ತಾನೆ. ಅಲ್ಲಿಗೆ ಬಂದ ಮೇಲೆ ಗೋಪಾಲನಿಗೆ ಸ್ವಾಮಿಗಳು ವೈದ್ಯ ವಿದ್ಯೆಯಲ್ಲಿ ತರಬೇತಿ ಕೊಡುತ್ತಾರೆ. ಮತ್ತು ಅವರ ತಾಯಿ ಹಾಗೂ ಅವನಿಗೆ ಮೋಸಮಾಡಿದ ಆತನ ಸ್ನೇಹಿತರ ವಿವರಗಳನ್ನು ತಮ್ಮ ಇಬ್ಬರು ಶಿಷ್ಯರಿಗೆ ತಿಳಿಸಿ ಇವರು ಅ ಊರಿಗೆ ಹೋಗಿ ಮೊದಲು ಅವರ ತಾಯಿಗೆ ಸಾಂತ್ವನ, ಹೇಳಬೇಕೆಂದು ಮತ್ತು ಅವನ ಸ್ನೇಹಿತರ ವಿವರಗಳನ್ನೆಲ್ಲ ತಿಳಿದು ಬರಬೇಕೆಂದು ಸೂಚಿಸುತ್ತಾರೆ. ಅದೇ ಪ್ರಕಾರ ಗೋಪಾಲ ಅವರ ಬಳಿ.ವಿದ್ಯೆ ಕಲಿತು ಪಂಡಿತ ಸೂರಪ್ಪ ಎಂಬ ಹೆಸರಿನಿಂದ ಪ್ರಖ್ಯಾತ ನಾಗುತ್ತಾನೆ. ಇವನ ಮುಖದ ತುಂಬಾ ಗಡ್ಡ ಮೀಸೆಗಳು ಬೆಳೆಯುತ್ತವೆ. ಹೀಗಿರುವಾಗ ಇವನ ಸ್ನೇಹಿತರು ಇವನಿಗೆ ಮೋಸ ಮಾಡಿದವರು ಆದ ಶಾನುಬೋಗ ರಾಮಚಂದ್ರ ಮತ್ತು ಗಂಗಾಧರ. ಇವರ ವಿವರಗಳನ್ನು ಕಲೆ ಹಾಕುತ್ತಾರೆ. ಹಾಗೆಯೇ ರಾಮಚಂದ್ರ ಇದ್ದ ಮನೆಯನ್ನು ಪತ್ತೆ ಮಾಡಿ ಸ್ವಯಂ ಮುಕುಂದಚಾರ್ಯರೇ ಆ ಮನೆಗೆ ಭೇಟಿ ನೀಡುತ್ತಾರೆ. ಅ ಮನೆಯ ಯಜಮಾನಿಯು ರಾಮಚಂದ್ರನ ಪ್ರೇಯಸಿಯು ಆದ ಕಮಲಬಾಯಿಯ ಭೇಟಿಯಾಗುತ್ತದೆ. ಆಕೆಯ ನಿವೇದನೆಗೆ ಉತ್ತರವಾಗಿ ಅವಳಿಗೆ ಸಮಾಧಾನ ಹೇಳುತ್ತಾರೆ. ಇವರು ಭೇಟಿ ಮುಗಿಸಿ ಹೊರ ಬರುವಾಗ ರಾಮಚಂದ್ರ ಮನೆಗೆ ಬರುತ್ತಾನೆ. ಅವನ ಜೊತೆಗೂ ಮಾತುಕತೆಗಳನ್ನು ಆಡುತ್ತಾರೆ. ಮತ್ತು ಅವನ ನಡವಳಿಕೆಯನ್ನು ಗಮನಿಸುತ್ತಾರೆ.

ಇದೇ ರೀತಿ ಕೆಲವು ದಿನ ಕಳೆದ ಮೇಲೆ ಸ್ವಾಮಿಗಳು ಅಲ್ಲಿಗೆ ಒಂದೆರೆಡು ತಿಂಗಳು ಹೋಗಲು ಆಗುವುದಿಲ್ಲ. ಈ ಮಧ್ಯೆ ಕಮಲಬಾಯಿ ತೀರಿಕೊಂಡ ವಿಷಯವನ್ನು ಅವರು ಒಬ್ಬ ಟೀ ಅಂಗಡಿ ಮಾಲೀಕನಿಂದ ತಿಳಿಯುತ್ತಾರೆ. ಇಲ್ಲಿ ಅವರಿಗೆ ರಾಮಚಂದ್ರನ ನಡವಳಿಕೆಯ ಮೇಲೆ ಅನುಮಾನ ಬರುವ ಸಂಗತಿಗಳು ಆಕೆಯ ಅಡುಗೆಯವಳಾದ ತಾರಾಬಾಯಿಯಿಂದ ತಿಳಿದು ಬರುತ್ತದೆ.

ಗೋಪಾಲನ ದುರ್ದೆಸೆಗೆ ಕಾರಣನಾದ ಇನ್ನೊಬ್ಬ ವ್ಯಕ್ತಿ 'ಗಂಗಾಧರ; ಅತನಿಗೆ ಹಣ ಸಂಪಾದನೆ ಮಾಡುವ ಗೀಳು, ಬಹಳವಾಗಿರುತ್ತದೆ. ಇದನ್ನು ಮನಗಂಡು ತಮ್ಮ ಶಿಷ್ಯರ ಮೂಲಕ ಉಪಾಯಾಂತರವಾಗಿ ಆತ ಮೈಸೂರಿಗೆ ಬರುವಂತೆ ಮಾಡಿ ಅವನ ಪರಿಚಯವನ್ನು ಮಾಡಿಕೊಳ್ಳುತ್ತಾರೆ. ಹಾಗೂ ಆತನಿಗೆ ಇದ್ದ ಹಣದ ಆಸಕ್ತಿಯನ್ನು ಕೆದಕಿ ಆತ ಯಾವುದಾದರೂ ದೊಡ್ಡ ಉದ್ಯೋಗ ಮಾಡಬೇಕೆಂದು ತಾವು ಅದಕ್ಕೆ ಬೇಕಾದ ಎಲ್ಲಾ ಸಹಾಯಗಳನ್ನು ಮಾಡುತ್ತೇವೆ. ಎಂದು ಆತನಿಗೆ ಹೇಳುತ್ತಾರೆ. ಇದಕ್ಕೆ ಪೋಷಕವಾಗಿ ಆತನಿಗೆ ತಮ್ಮ ಸ್ನೇಹಿತನಾಗಿದ್ದ ಒಬ್ಬ ಕೋಟ್ಯಾಧಿಪತಿ ಲೇವಾದೇವಿಗಾರನಾಗಿದ್ದ ಒಬ್ಬ ಸೇಠ್‌ನ ಪರಿಚಯ ಮಾಡಿಸುತ್ತಾರೆ. ಇದನ್ನೆಲ್ಲ ಪೂರ್ವ ಭಾವಿಯಾಗಿ ಅರಿತಿದ್ದ ಸೇಠ್ ಗಂಗಾಧರನಿಗೆ ಎಷ್ಟು ಬೇಕಾದರೂ ಕಾಗದ ಪತ್ರದ ಮೇಲೆ ಸಾಲ ಕೊಡುತ್ತೇನೆ ಎಂದು ವಾಗ್ದಾನ ಮಾಡುತ್ತಾನೆ. ಎಲ್ಲದಕ್ಕೂ ಭೂಮಿಕೆ ಸಿದ್ಧವಾಗುತ್ತದೆ. ಇದರ ಪರಿಚಯ ಮಾಡಿಕೊಂಡ ರಾಮಚಂದ್ರ ಒಂದು ದಿನ ಆಕಸ್ಮಾತಾಗಿ ಸೇಠ್ ಅಂಗಡಿಯಲ್ಲಿ 'ನಾಟಾಷ' ಎಂಬ ಒಬ್ಬ ಸುಂದರ ನೃತ್ಯಗಾತಿಯನ್ನು ಕಾಣುತ್ತಾನೆ. ಅವಳ ರೂಪದಿಂದ ಆಕರ್ಷಿತನಾಗುತ್ತಾನೆ. ಆಕೆ ನೃತ್ಯದ ಪ್ರದರ್ಶನವನ್ನು ಕೊಡುತ್ತಿದ್ದ ಕಡೆ ಹೋಗಿ ನೃತ್ಯವನ್ನು ವೀಕ್ಷಿಸುತ್ತಾನೆ. ಇದೆನ್ನೆಲ್ಲ ಮುಂದೆಯೇ ಊಹಿಸಿದ್ದ ಸೇಠ್ ಮತ್ತು ಸ್ವಾಮಿಜೀ ಆಕೆಗೆ ರಾಮಚಂದ್ರನ ಬಗ್ಗೆ ಎಲ್ಲಾ ಸೂಚನೆಗಳನ್ನು ಕೊಟ್ಟಿರುತ್ತಾರೆ. ಇವರ ಇನ್ನೊಬ್ಬ ಅತ್ಯಂತ ಆಪ್ತ, ಒಬ್ಬ ಪೋಲೀಸ್ ಎಸ್ಪಿ ಆಗಿದ್ದು. ಇವರ ಎಲ್ಲಾ ಕಾರ್ಯಗಳಲ್ಲೂ ಸಹಾಕಾರ ನೀಡುತ್ತ ಇರುತ್ತಾನೆ. ಈತನು ಕೂಡ ಸ್ವಾಮಿಜೀಯ ಪರಮ ಆಪ್ತ, ಈ ರೀತಿ ಭೂಮಿಕೆ ಸಿದ್ಧವಾಗಿ ದಾಳಗಳು ಉರುಳುತ್ತವೆ. ರಾಮಚಂದ್ರ ಪ್ರಯತ್ನ ಪಟ್ಟು ನಾಟಾಶಗಳ ಪರಿಚಯ ಮತ್ತು ಸ್ನೇಹ ಸಂಪಾದಿಸುತ್ತಾನೆ. ಆಕೆಗ್ಾಗಿ ಸಾವಿರಾರು ರೂಪಾಯಿಗಳನ್ನು ಖರ್ಚು ಮಾಡುತ್ತಾನೆ. ಆಕೆಗಾಗಿ ಒಂದು ಕಾರನ್ನು ಕೊಳ್ಳುತ್ತಾನೆ. ಮತ್ತು ಒಂದು ಮನೆಯನ್ನು ಕೊಳ್ಳುತ್ತಾನೆ, ಇದೆಲ್ಲ ಸೇಠ್ ಮತ್ತು ಸ್ವಾಮಿಜೀ ಹಾಗೂ ಪೋಲೀಸ್ ಎಸ್ಪಿ ಸಾಹೇಬರಿಗೆ ಗೊತ್ತಿದ್ದು. ಅವರು ಆಕೆಗೆ ಬೇಕಾದ ರಕ್ಷಣೆಯನ್ನು ಗುಪ್ತವಾಗಿ ಒದಗಿಸುತ್ತ ಇರುತ್ತಾರೆ. ರಾಮಚಂದ್ರ ಆಕೆಗಾಗಿ ಸಾವಿರಾರು ರೂಪಾಯಿಗಳನ್ನು ವ್ಯಚ್ಚ ಮಾಡುತ್ತಾನೆ. ಇದೆಕ್ಕೆಲ್ಲ ದುಡ್ಡು ಆತನ ಹಿಂದಿನ ಪ್ರೇಯಸಿಯಾದ ಕಮಲಬಾಯಿಗೆ ಸೇರಿದ ಆಸ್ತಿಯಿಂದ ಬರುತ್ತದೆ.ರಾಮಚಂದ್ರನ ಚಟ ಹೆಚ್ಚಾಗಿ ಆತ ಮಿತಿ ಮೀರಿದುದ್ದನ್ನು ಗಮನಿಸಿ ನಾಟಾಶ ಅವನನ್ನು ಉದಾಸೀನ ಮಾಡುತ್ತಾಳೆ ಮತ್ತು

ಅವಳನ್ನು ನೋಡಲು ಹಾಗೂ ಕಾರ್ಯಕ್ರಮಕ್ಕೆ ಆಹ್ವಾನಿಸಲು ಊರಿನ ಅತ್ಯಂತ ಶ್ರೀಮಂತರು. ಪ್ರಭಾವಿಗಳು ಆದ ಇಬ್ಬರು ಯುವಕರು ಬರುತ್ತ ಇರುವುದು ರಾಮಚಂದ್ರನ ಗಮನಕ್ಕೆ ಬಂದು ಆತ ಉದ್ವೇಗಕ್ಕೆ ಒಳಗಾಗುತ್ತಾನೆ. ಈ ಸಮಯದಲ್ಲಿ ಸೇಠ್ ಮತ್ತು ಸ್ವಾಮಿಜೀ ಅವಳನ್ನು ಎಚ್ಚಾರಿಸುತ್ತಾರೆ. ಆದರೂ ತಾವು ಹೇಳಕೊಟ್ಟ ಎಚ್ಚರಿಕೆಯನ್ನು ಸ್ವಲ್ಪಕಾಲ ಮರೆತ ನಾಟಾಶ ರಾಮಚಂದ್ರನಿಂದ ವಿಷ ಪ್ರಾಹಸನಕ್ಕೆ ಗುರಿಯಾಗುತ್ತಾಳೆ. ಕೂಡಲೆ ಆಕೆಗೆ ವೈದ್ಯಕೀಯ ಚಿಕಿತ್ಸೆಗೆ ಸೇರಿಸಿ ಅವಳು ಊಟ ಮಾಡಿದ ವಸ್ತುಗಳನ್ನು ವಾಂತಿ ಮಾಡಿಸಿ ಪರೀಕ್ಷೆಗೆ ಕಳುಹಿಸುತ್ತಾರೆ. ಹಾಗೂ ನಾಟಾಶಗಳಗೆ ಬೇಕಾದ ಎಲ್ಲಾ ಚಿಕಿತ್ಸೆಗಳನ್ನು ಮಾಡಿಸುತ್ತಾರೆ. ಆಹಾರದ ಜೊತೆಯಲ್ಲಿ ವಿಷ ಪ್ರಯೋಗವಾಗಿರುವುದು ಪರೀಕ್ಷೆಗಳಂದ ಧೃಢ ಪಡುತ್ತದೆ. ಈ ಸಾಕ್ಷ್ಯದ ಆಹಾರದ ಮೇಲೆ ಪೋಲೀಸರು ಮೊಕದ್ದಮೆ ಹಾಕಿ ರಾಮಚಂದ್ರನನ್ನು ಬಂಧಿಸುತ್ತಾರೆ.

ಇತ್ತ ಗಂಗಾಧರ ಯಾವುದಾದರೂ ಅತಿ ಹಣ ತರುವ ಉದ್ಯೋಗಮಾಡಲು ಯೋಚಿಸಿ ಸೇಠ್ ಮತ್ತು ಸ್ವಾಮಿಜೀ ಸಿದ್ಧಪಡಿಸಿದ್ದ ಇನ್ನೊಂದು ಬಲೆಗೆ ಸಿಕ್ಕಿಕೊಳ್ಳುತ್ತಾನೆ. ಅತಿ ಬೆಲೆ ಬಾಳುವ ಒಂದು ಖನಿಜವನ್ನು ಗಣಿ ಇಟ್ಟು ತೆಗೆದು ಅದನ್ನು ಶತ್ರು ದೇಶಕ್ಕೆ ಮಾರಿ ಅಗಾಧವಾದ ದುಡ್ಡನ್ನು ಸಂಪಾದಿಸುವ ಯೋಜನೆ ಅದಾಗಿರುತ್ತದೆ. ಅದಕ್ಕೋಸ್ಕರ ಸೇಠ್ ಬಳ ಕಾಗದ ಬರೆದು ಕೊಟ್ಟು ಸಾಲ ಪಡೆದು ಗಣಿಗಾರಿಕೆಯನ್ನು ಪ್ರಾರಂಭಿಸುತ್ತಾನೆ. ಇದೆಲ್ಲವೂ ಸೇಠ್ ಸ್ವಾಮಿಜೀ ಮತ್ತು. ಪೋಲೀಸ್ ಎಸ್ಪಿ ಗಮನಕ್ಕೆ ಬಂದಿರುತ್ತದೆ. ಅವರು ತಮ್ಮ ಗುಪ್ತಚಾರರ ಮೂಲಕ ಇವನನ್ನು ಹಿಂಬಾಲಿಸುತ್ತಾ ಇರುತ್ತಾರೆ.

ಅಷ್ಟರಲ್ಲಿ ಕೇಂದ್ರ ಸರಕಾರದಿಂದ ಸ್ಥಳೀಯ ಅಧಿಕಾರಿಗಳಗೆ ಒಂದು ತುರ್ತು ಸಂದೇಶ ಬರುತ್ತದೆ. ಅದೇನೆಂದರೆ ಈ ಕಡೆಯಿಂದ ಕೆಲವು ಹುಡುಗಿಯರ ಕಳ್ಳ ಸಾಗಾಣಿಕೆ ನಡೆಯುತ್ತಿದೆ. ಎಂಬ ಆತಂಕಕಾರಿ ಸುದ್ಧಿ. ಇದನ್ನು ಹಿಂಬಾಲಿಸಿ ಕೇಂದ್ರದಿಂದ ವರಿಷ್ಠ ಅಧಿಕಾರಿಗಳು. ಇಂಟರ್‌ಪೋಲ್ ಅಧಿಕಾರಿಗಳು ಬರುತ್ತಾರೆ. ಈ ಕಳ್ಳ ಸಾಗಾಣಿಕೆಗೆ ಸೂತ್ರಧಾರ ಅಂತರರಾಷ್ಟ್ರೀಯ ಪ್ರಖ್ಯಾತಿಯ ಕುಖ್ಯಾತ ನಾಯಕ ನಾದೀರ್ ಷಾ, ಈತ ಬಹಳ ಪ್ರಬಾವಿ ಶ್ರೀಮಂತ ಹಾಗೂ ಯಾವುದಕ್ಕೂ ಹೇಸದ ಮನುಷ್ಯ ಈತನಿಗೆ ಸಹಾಯಕರಾಗಿ ಅನೇಕ ಜನ ಚೀನಿ ಮತ್ತು ಜಪಾನಿ ಭಂಟರಿರುತ್ತಾರೆ. ಈ ಜಾಡು ಹಿಡಿದು ಪೋಲೀಸ್ ಶಾಖೆಯ ಏಜೆಂಟರು ಎಲ್ಲಾ ಕಡೆ ಗಮನ ಇಟ್ಟಿರುತ್ತಾರೆ. ಅಷ್ಟು ಹೊತ್ತಿಗೆ ಇಲ್ಲಗೂ, ಪಕ್ಕದ ರಾಜ್ಯಕ್ಕೂ, ನಡುವೆ ಒಂದು ಊರಿನಲ್ಲಿ ಒಂದು ದೊಡ್ಡ ಜಾತ್ರೆ ಆಗುವ ಕಾಲ ಬರುತ್ತದೆ. ಅಲ್ಲಗೆ ಎಲ್ಲಾ ವರಿಷ್ಠ ಅಧಿಕಾರಿಗಳು ರಾಜ್ಯದ ಹಾಗೂ ನೆರೆ ರಾಜ್ಯದ ಪೋಲೀಸ್ ಅಧಿಕಾರಿಗಳು ಬಂದು ಮಾರುವೇಷದಲ್ಲಿ ನಿಲ್ಲುತ್ತಾರೆ.

ಗಂಗಾಧರ ಸಿದ್ಧಪಡಿಸಿದ ಖನಿಜದ ಅದಿರುಗಳನ್ನು ಸಾಗಿಸಲು ಲಾರಿಗಳನ್ನು ಸಿದ್ಧ ಮಾಡುತ್ತಾನೆ. ಈ ಲಾರಿಯಲ್ಲಿ ಮೂಟೆಯಲ್ಲಿ ತುಂಬಿದ ಅದಿರನ್ನು ಸಮುದ್ರದ

ದಂಡೆಗೆ ಒಯ್ಯಲು ಸಿದ್ಧ ಮಾಡುತ್ತಾನೆ. ಇದೆನ್ನೆಲ್ಲ ಗಮನಿಸಿ ಸ್ವಾಮಿಜೀ. ಸೇಠ್ ಮತ್ತು ಎಸ್ಪಿಯವರು ತಮ್ಮ ಕಡೆಯವರೇ ಚಾಲಕರಾಗಿ ಇರುವ ಲಾರಿಗಳನ್ನು ಗಂಗಾಧರ್ ಬಾಡಿಗೆಗೆ ತೆಗೆದು ಕೊಳ್ಳುವಂತೆ ಏರ್ಪಾಡು ಮಾಡುತ್ತಾರೆ. ಇದೆಲ್ಲ ಗುಪ್ತವಾಗಿ ನಡೆಯುತ್ತವೆ. ಗಂಗಾಧರ ಲಾರಿಗಳನ್ನು ಸಮುದ್ರದ ಬಳಿ ಒಯ್ಯುವ ದಿವಸ ಅವನ ಜೊತೆ ಸೇಠ್ ಕೂಡ ಹೋಗಿ ಬರುತ್ತಾನೆ. ಈ ವಿಷಯ ಮುಂಚಿತವಾಗಿ ತಿಳಿದು ಪೋಲೀಸರು ಮತ್ತು ರಕ್ಷಣಾ ಇಲಾಖೆ. ಬೇಕಾದ ಏರ್ಪಾಡುಗಳನ್ನು ಮಾಡಿರುತ್ತದೆ. ಆ ರಾತ್ರಿ ಲಾರಿಗಳಲ್ಲಿ ಬಂದ ಅದಿರನ್ನು ಸಮುದ್ರದ ಕರಾವಳಿಯ ಬಳಿ ವಾಸವಾಗಿದ್ದ ಮೀನುಗಾರರ ತಂಡದವರ ಸಹಾಯದಿಂದ ಸಮುದ್ರದಲ್ಲಿ ಬಂದ ಬೇರೆ ದೇಶದ ಹಡಗಿಗೆ ಬದಲಾಯಿಸುತ್ತಾರೆ. ಮಧ್ಯರಾತ್ರಿಯ ಸಮುದ್ರದಲ್ಲಿ ಈ ಹಡಗನ್ನು ಸುತ್ತಲಿನಿಂದ ಸಿಮ್‌ಲಾಂಚ್‌ಗಳಲ್ಲಿ ಪೋಲೀಸರು ಸುತ್ತುವರೆಯುತ್ತಾರೆ. ಅದೇ ಸಮಯಕ್ಕೆ ಆಕಾಶದಿಂದ ಎರಡು ಹೆಲಿಕ್ಯಾಪ್ಟರ್ ಬರುತ್ತವೆ. ಸಮೀಪವಾದಾಗ ಎಚ್ಚರಿಕೆಯ ಗುಂಡು ಹಾರಿಸಿ ತಾವು ಪೋಲೀಸರು ಎಂದು ಧ್ವನಿ ವರ್ಧಕಗಳ ಮೂಲಕ ಹೇಳುತ್ತಾರೆ. ಇದರ ಪರಿಣಾಮವಾಗಿ ಹಡಗಿನ ಕ್ಯಾಪ್ಟನ್ ಶರಣಾಗುತ್ತಾನೆ. ಪೋಲೀಸರಿಗೆ, ಕೂಡಲೇ ಸ್ಟಿಮ್ ಲಾಂಚ್‌ನಲ್ಲಿದ್ದ ಪೋಲೀಸರು ನೌಕದಳದವರು ಹಡಗನ್ನು ಸಮೀಪಿಸಿ ಅದನ್ನು ಹತ್ತುತ್ತಾರೆ. ಆಗ ಸ್ವಲ್ಪ ಘರ್ಷಣೆಯಾಗಿ ಕೆಲವರು ಸಾಯುತ್ತಾರೆ. ನೌಕಾ ಸಿಬ್ಬಂದಿ, ಹಡಗನ್ನು ವಶಕ್ಕೆ ಪಡೆದು, ದಂಡೆಯ ಕಡೆ ಮರಳುತ್ತಾರೆ. ಈ ಕಾರ್ಯಾಚರಣೆಯಲ್ಲಿ ಗಂಗಾಧರ ಬಂದಿತನಾಗುತ್ತಾನೆ.

ಊರಿನಲ್ಲಿ ಇದ್ದ ಗೌರಿ ತನ್ನ ಗಂಡ ಚನ್ನೇಗೌಡನ ಹಿಂಸೆಯಿಂದ ಬೇಸತ್ತು ಮನೆಯಿಂದ ಹೊರಟು ನಗರಕ್ಕೆ ಬಂದು ತನ್ನ ಸ್ನೇಹಿತೆ ಭಾರತಿಯ ಮನೆಯಲ್ಲಿ ಉಳಿಯುತ್ತಾಳೆ. ಆ ದಿನದ ಸಂಗೀತದ ಕಾರ್ಯಕ್ರಮ ಭಾರತಿ ಗೋಪಾಲನ ಸಹಪಾಠಿ, ಹಾಗೂ ಪ್ರೇಮಿ, ಅವಳ ಮನೆಯಲ್ಲಿ ನಡೆಯುತ್ತದೆ. ಅ ದಿನ ಈ ಕಾರ್ಯಾಕ್ರಮವನ್ನು ತಿಳಿದ ಗೋಪಾಲ ಅಲ್ಲಿಗೆ ಬರುತ್ತಾರೆ. ಗೌರಿಯು ಬಂದಿರುತ್ತಾಳೆ. ಗೋಪಾಲನ ಬಗ್ಗೆ ಸದಾ ಎಚ್ಚರ ವಿದ್ದ ಪೋಲೀಸ್ ಅಧಿಕಾರಿಗಳು ಕೇಂದ್ರ ಸರ್ಕಾರದ ವರಿಷ್ಠರು ಇಟಲ್‌ಪೋಲ್ ಅಧಿಕಾರಿಗಳು ಇಲ್ಲಿಗೆ ಮಾರುವೇಶದಲ್ಲಿ ಆ ಕಾರ್ಯಕ್ರಮಕ್ಕೆ ಬಂದಿರುತ್ತಾರೆ. ಇವೆರಲ್ಲರ ಕಣ್ಣು ಗೋಪಾಲನ ಮೇಲೆ ಇರುತ್ತದೆ. ಸಂಗೀತ ನಡೆಯುತ್ತಿರುವಾಗ ಅಲ್ಲಿಗೆ ನುಗ್ಗಿ ಬಂದ ಗೌರಿಯ ಪತಿ ಚನ್ನೇಗೌಡ ಮನಸೋ ಇಚ್ಚೆ ಗೌರಿಯನ್ನು ಗೋಪಾಲನನ್ನು ಬೈಯುತ್ತ ಆತನ ಕಡೆಗೆ ಚಾಕುವನ್ನು ಎಸೆಯುತ್ತಾನೆ. ಇದನ್ನು ಗಮನಿಸಿದ ಗೌರಿ ತಕ್ಷಣ ಹಾರಿ ಗೋಪಾಲನನ್ನು ತಬ್ಬಿಕೊಳ್ಳುತ್ತಾಳೆ. ಚಾಕು ಗೌರಿ ಹೊಟ್ಟೆಗೆ ಬಿದ್ದು ಆಕೆಗೆ ಏಟಾಗಿ ಸತ್ತು ಹೋಗುತ್ತಾಳೆ. ಹಾಗೂ ಗೋಪಾಲ ಮತ್ತು ಭಾರತಿಯ ಮದುವೆ ಮಾಡಬೇಕೆಂದು ತನ್ನ ತಂದೆಗೆ ಬೇಡಿಕೊಳ್ಳುತ್ತಾಳೆ. ಇದಕ್ಕೆ ಆಕೆಯ ತಂದೆ ಒಪ್ಪಿಕೊಳ್ಳುತ್ತಾನೆ. ಈ ಗಲಾಟೆಯಲ್ಲಿ ನೇಪತ್ಯದ ಕಡೆಗೆ ಎದ್ದು ಬಂದ ಭಾರತಿಯ

ಅಪಹರಣವಾಗುತ್ತದೆ.ಇದು ಸುದ್ದಿಯಾಗಿ ಹರಡಿ ತಕ್ಷಣ ಪೋಲೀಸರು ಕಾರ್ಯಾಪ್ರವೃತ್ತರಾಗುತ್ತಾರೆ. ನಗರದಿಂದ ಸ್ವಲ್ಪ ದೂರ ಇನ್ನೊಂದು ರಾಜ್ಯದಲ್ಲಿ ನಡೆಯುತ್ತಿದ್ದ ಜಾತ್ರೆಯ ಕಡೆ ಎಲ್ಲರೂ ಭಾವಿಸಿ ನಾಲ್ಕು ತಂಡಗಳಾಗಿ ಮಾಡಿಕೊಂಡು ಅ ಜಾತ್ರೆಯಿಂದ ಬೇರೆ ಕಡೆ ಹೋಗುತ್ತಿದ್ದ ಎಲ್ಲಾ ಮಾರ್ಗಗಳಲ್ಲೂ ಗುಪ್ತವಾಗಿ ಅ ಅಡಗಿ ಕಾವಲು ಕಾಯುತ್ತಾರೆ. ಜಾತ್ರೆಯ ಮಾಳದಿಂದ ಕೆಲವು ಹುಡುಗಿಯರು ಮತ್ತು ಹುಡುಗರು ಅರ್ಧ ಪ್ರಜ್ಞಾನಸ್ಥೆಯಲ್ಲಿ ನಡೆದು ಬರುವುದು ಮತ್ತು ಅವರನ್ನೆಲ್ಲ ಕಾರುಗಳಲ್ಲಿ ಜಾತ್ರೆ ಮಾಳದ ಸ್ವಲ್ಪ ದೂರದಲ್ಲಿದ್ದ ಒಂದು ನಿರ್ದಿಷ್ಟ ಸ್ಥಳಕ್ಕೆ ಒಯ್ಯುವುದನ್ನು ಗಮನಿಸಿ ಪೋಲೀಸರು ಹಿಂಬಾಲಿಸುತ್ತಾರೆ. ಆದರೂ ಇವರ ಎಚ್ಚರಿಕೆಯನ್ನು ಭೇದಿಸಿ ಅಪಹರಣಕಾರರು ಮುಂದುವರೆಯುತ್ತಾರೆ. ಆಗ ಇನ್ನು ಉಳಿದ ತಂಡಗಳಲ್ಲಿ ಇದೆನ್ನೆಲ್ಲ ಪೂರ್ವಭಾವಿಯಾಗಿ ಊಹಿಸಿದ್ದ ವರಿಷ್ಠಾಧಿಕಾರಿಗಳು. ಇಂಟರ್‌ಪೋಲ್ ಅಧಿಕಾರಿಗಳು ಆ ಸಮಯಕ್ಕೆ ಬಂದು ಒಂದು ಹೆಲಿಕ್ಯಾಪ್ಟರ್ ಮೇಲೆ ಧಾಳ ಮಾಡಿ ಅದರಲ್ಲಿದ್ದ ಕುಖ್ಯಾತ ಅಂತರರಾಷ್ಟ್ರೀಯ ಕಳ್ಳ ಸಾಗಾಣಿದಾರ ನಾದೀರ್‌ಷಾನನ್ನು. ಅವನ ಅನುಯಾಯಿಗಳನ್ನು ಬಂಧಿಸುತ್ತಾರೆ. ಅದರಲ್ಲಿ ಕೆಲವರು ನಡೆಸಿದ ಕಾರ್ಯಚರಣೆಯಿಂದ ಕೆಲವರು ತಪ್ಪಿಸಿಕೊಂಡು ಉಳಿದವರು ಸಿಕ್ಕಿ ಬೀಳುತ್ತಾರೆ. ಭಾರತಿ ಮತ್ತು ಇತರ ಕೆಲವು ಹುಡುಗಿಯರನ್ನು ರಕ್ಷಿಸಿ. ಇವರನ್ನು ಅಪಹರಿಸಲು ಕಾರಣರಾದ ಎಲ್ಲಾ ವ್ಯಕ್ತಿಗಳನ್ನು ಸೆರೆಹಿಡಿಯಲಾಗುತ್ತದೆ. ಭಾರತಿಯನ್ನು ಕರೆತಂದು ಅವಳ ಪೋಷಕರಿಗೆ ಒಪ್ಪಿಸುತ್ತಾರೆ. ಭಾರತಿ ತನ್ನ ಅಗಲಿದ ಸ್ನೇಹಿತೆ ಗೌರಿಗಾಗಿ ದುಃಖಿಸುತ್ತಾಳೆ. ಈ ರೀತಿ ಗೋಪಾಲಸ್ವಾಮಿ ಮತ್ತು ಸೇಠ್ ಸಹಾಯದಿಂದ ತನ್ನ ಅವನತಿಗೆ ಕಾರಣರಾಗಿದ್ದ ರಾಮಚಂದ್ರ ಮತ್ತು ಗಂಗಾಧರ ಇವರ ಮೇಲೆ ಸೇಡುತಿರಿಸಿಕೊಳ್ಳುವುದರಲ್ಲಿ ಯಶಸ್ವಿಯಾಗುತ್ತಾನೆ. ಇದು ಈ ಕಾದಂಬರಿಯ ಸಾರಾಂಶ. ಭಾರತಿ ಮತ್ತು ಗೋಪಾಲ ಕಾಲೇಜಿನಲ್ಲಿ ಸಹಪಾಠಿಗಳಾಗಿದ್ದರು. ಆ ಕಾಲೇಜಿನಿಂದ ಒಮ್ಮೆ ಕಾಲೇಜಿನ ತಂಡ ಮೇಲುಕೋಟೆಗೆ ಪ್ರವಾಸ ಬಂದಿದ್ದರು. ಅ ಸಂದರ್ಭದಲ್ಲಿ ವಿಷಯ ತಿಳಿದ ಗೋಪಾಲನು ಅಲ್ಲಿಗೆ ಬಂದಿದ್ದ. ಸಮಯ ಸಾಧಿಸಿ ಇಬ್ಬರು ಮೇಲುಕೋಟೆಯ ಇತಿಹಾಸ ಪ್ರಸಿದ್ಧವಾದ ಅಕ್ಕ-ತಂಗಿಯರ ಕೊಳದ ಹತ್ತಿರ ಬಂದರು. ಅಲ್ಲಿ ಸುತ್ತಾಡುತ್ತ ಇಬ್ಬರು ಕೊಳದ ನೀರನ್ನು ಎತ್ತಿಕೊಂಡು ತಮ್ಮ ಬಯಕೆಗಳನ್ನು ಮಾನಸಿಕವಾಗಿ ನಿವೇದಿಸಿಕೊಂಡರು. ಅಮೇಲೆ ಹಾಗೆಯೇ ಸುತ್ತಾಡುತ್ತ ಹೊರಡುವ ವೇಳೆ ಸಮೀಪಿಸಿದಾಗ ಪರಸ್ಪರ ಕೇಳಿಕೊಂಡರು. ಭಾರತಿ. ಗೋಪಾಲನನ್ನು ಪ್ರಶ್ನಿಸಿ ನೀನೇನು ಕುರಿತುಕೊಂಡೆ ಎಂದು ಕೇಳಿದಳು. ಅದಕ್ಕೆ ಗೋಪಾಲ ನೀನೇನು ಕೇಳಿಕೊಂಡೆ ಮೊದಲು ಹೇಳು ಎಂದ, ಉತ್ತರವಾಗಿ ಭಾರತಿ ಇಲ್ಲಿ ಸೇರೋಣ, ಆಗದೇ ಹೋದರೆ ಅಲ್ಲಿ ಸೇರೋಣ ಎಂದು ಕೇಳಿಕೊಂಡೆ ಎಂದಳು, ಇದೇ ಮಾತಿನ ಪ್ರಕಾರವೇ ಅವರ ಜೀವನದ ಘಟನೆಗಳು ನಡೆಯುತ್ತ ಹೋಗುತ್ತವೆ.

ಭಾರತಿ ಒಳ್ಳೆಯ ಹಾಡುಗಾರ್ತಿ, ಚಂದ್ರೇಗೌಡರ ಮನೆಯಲ್ಲಿ ಏರ್ಪಡಾಗಿದ್ದ ಗಾಯನ ಸಮಾರಂಭದಲ್ಲಿ ಆಕೆ. ಬಹಳ ಚೆನ್ನಾಗಿ ಹಾಡಿದಳು.ಗೌರಿಯ ತಂದೆ. ಚಾಮೇಗೌಡರು ತಾವು ಆಡಿದ್ದ ಮಾತಿನ ಪ್ರಕಾರ ಭಾರತಿಯನ್ನು ಗೋಪಾಲನಿಗೆ ತಂದು ಮದುವೆ ಮಾಡಿಸಿ ತಮ್ಮ ವಾಗ್ದಾನವನ್ನು ನಡೆಸಿಕೊಳ್ಳುತ್ತಾರೆ. ಈ ರೀತಿ ಭಾರತೀ ಮತ್ತು ಗೋಪಾಲ ತಮ್ಮ ಆಸೆಗಳನ್ನು ಪೂರ್ಣ ಮಾಡಿ ಕೊಳ್ಳುತ್ತಾರೆ. ಆತನ ಸ್ನೇಹಿತರಾಗಿದ್ದು. ಮೋಸದಿಂದ ಅವನ ದುರ್ದೆಸೆಗೆ ಕಾರಣರಾದ ರಾಮಚಂದ್ರ ಮತ್ತು ಗಂಗಾಧರ ಇವರಿಗೆ ತಕ್ಕ ಶಿಕ್ಷೆಯಾಗುತ್ತದೆ. ಈ ಕಾದಂಬರಿ ಸಹನೆ, ಸಂಯಮ ಮತ್ತು ಗುರಿಯನ್ನು ತಲುಪುವ ಪ್ರಯತ್ನಗಳಲ್ಲಿ ಯಶಸ್ವಿಯಾಗಲು ಒಬ್ಬ ವ್ಯಕ್ತಿ ಪಡಬೇಕಾದ ಶ್ರಮಗಳನ್ನು ಅತ್ಯಂತ ಸೂಕ್ಷ್ಮವಾದ ರೀತಿಯಲ್ಲಿ ಚಿತ್ರಿಸಿದೆ,

**ಕತ್ತರಿಯ ನಡುವೆ**

ಇದು ಒಂದು ಅಪ್ರಕಟಿತವಾದ ಸಮಾಜಿಕ ಕಾದಂಬರಿಯಾಗಿದೆ. ಸಂಪೂರ್ಣವಾಗಿ ವಿದ್ಯಾರ್ಥಿ ಜೀವನಕ್ಕೆ ಸಂಬಂಧಿಸಿದೆ. ಉನ್ನತ ವ್ಯಾಸಂಗದ ಕಾಲದಲ್ಲಿ ಆತ ಎದುರಿಸಬೇಕಾದ ಸಮಸ್ಯೆಗಳನ್ನು ಅತ್ಯಂತ ಮನೋಜ್ಞವಾದ ರೀತಿಯಲ್ಲಿ ಬಿಡಿಸುತ್ತದೆ. ಆ ಕಾಲದಲ್ಲಿ ಉನ್ನತ ವ್ಯಾಸಂಗದಲ್ಲಿ ನಿರತರಾದ ವಿದ್ಯಾರ್ಥಿಗಳು, ವಿದ್ಯಾರ್ಥಿನಿಯರು ಮತ್ತು ಅಧ್ಯಾಪಕರ ಸಂಬಂಧಗಳ ಬಗ್ಗೆ ವಿವರಗಳನ್ನು ಬಹಳ ಆತ್ಮೀಯವಾದ ರೀತಿಯಲ್ಲಿ ಬಿಡಿಸುತ್ತದೆ. ಈ ಪೈಕಿ ಒಬ್ಬ ಅಮಾಯಕನಾದ ವಿದ್ಯಾರ್ಥಿ ತನಗೆ ಗೊತ್ತಿಲ್ಲದಂತೆ ಪ್ರಪಾತಕ್ಕೆ ಬೀಳುವ ಮನೋಜ್ಞ ಚಿತ್ರಣ ಮತ್ತು ಅವನನ್ನು ಈ ಹಿಂಸೆಯಿಂದ ಉಳಸಲು ಪ್ರಯತ್ನಿಸುವ ಆತನ ಸಹ ವಿದ್ಯಾರ್ಥಿನಿಯರ ಪ್ರಯತ್ನಗಳು ಇಲ್ಲಿ ಚಿತ್ರಿತವಾಗಿದೆ. ಅನೇಕ ವಾಸ್ತವಿಕ ಅಂಶಗಳನ್ನು ಒಳಗೊಂಡ ಈ ಕಾದಂಬರಿ ಪ್ರಕಟಿತವಾಗಿಲ್ಲ.

**:- ಯಾರಿಗೆ ಯಾರು ಇಲ್ಲ :-**

ಈ ಕಾದಂಬರಿಯು ಒಂದು ಅಪ್ರಕಟಿತ ಕಾದಂಬರಿ, ಇದರಲ್ಲಿ ಒಂದು ಪಟ್ಟಣದ ಸಾಮಾಜಿಕ ಜೀವನದ ವಿವರಣೆ ಇದೆ ತೀರ ದುರ್ಬಲ. ಆರ್ಥಿಕ ಪರಿಸ್ಥಿತಿಯಲ್ಲಿ ಇದ್ದ ಒಬ್ಬ ವ್ಯಕ್ತಿ ಅತ್ಯಂತ ವಿಚಕ್ಷಣತೆಯಿಂದ ರಾಜಕೀಯ ಜೀವನಕ್ಕೆ ಪ್ರವೇಶಿಸುವ ಪ್ರಯತ್ನ ಇಲ್ಲಿ ಚಿತ್ರಿತವಾಗಿದೆ. ರಾಜಕೀಯ ಜೀವನದ ಪ್ರಾರಂಭಕ್ಕಾಗಿ ಆತ ಮೊದಲು ತನ್ನ ಸ್ನೇಹಿತರ ಬಳಗವನ್ನು ವಿಸ್ತರಿಸಿಕೊಳ್ಳುತ್ತಾನೆ. ಅವರನ್ನು ಅನೇಕ ಕಾರ್ಯ ಕ್ಷೇತ್ರಗಳಿಗೆ ತಂದು ಸ್ಥಾಪಿಸುತ್ತಾನೆ. ಎಲ್ಲರೂ ಸಾಕಷ್ಟು ಸ್ಥಿತಿವಂತರಾದ ಮೇಲೆ ಒಂದು ಗುಂಪು ಕಟ್ಟಿಕೊಂಡು ಪುರಸಭಾ ಚುನಾವಣೆಗೆ. ಆತನು ಸೇರಿದಂತೆ ಎಲ್ಲರೂ ಚುನಾವಣೆಗೆ ಸ್ಪರ್ಧಿಸುತ್ತಾರೆ. ಹಾಗೂ ಬಹುಮತ ಪಡೆದು

ಚುನಾವಣೆಯಲ್ಲಿ ಗೆಲ್ಲುತ್ತಾರೆ. ಆನಂತರ ಅದ್ಯಕ್ಷಗಿರಿಗೆ ನಡೆಯುವ ಸ್ಪರ್ಧೆಯಲ್ಲಿ ಈತನಿಂದ ಉಪಕಾರ ಹೊಂದಿದ ತೀರ ಆಪ್ತನಾದ ಒಬ್ಬ ವ್ಯಕ್ತಿ ಒಳ ಗುಂಪನ್ನು ಕಟ್ಟುತ್ತಾನೆ. ಚುನಾವಣೆಗೆ ಇಬ್ಬರು ಸ್ಪರ್ಧಿಸುತ್ತಾರೆ. ಚುನಾವಣೆಯ ಫಲಿತಾಂಶವು ಹೊರಬಿದ್ದಾಗ ಎಣಿಕೆಯ ಕೊಠಡಿಗೆ ತನ್ನ ಕಡೆಯ ಜನರೊಂದಿಗೆ ಬಂದ ಅಭ್ಯರ್ಥಿ. ಎಣಿಕೆಯು ಮುಗಿದ ಮೇಲೆ ಪರಾಭವಗೊಂಡು ಒಬ್ಬನೇ ಬರುತ್ತಾನೆ.ಈ ದಾರುಣ ಹಾಗೂ ಹತಾಶ ವೃತ್ತಾಂತವನ್ನು ಈ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಇದು ಇವತ್ತಿನ ಸಾಮಾಜಿಕ ಮತ್ತು ರಾಜಕೀಯ ಪರಿಸ್ಥಿತಿಯನ್ನು ಬಿಂಬಿಸುವ ಒಂದು ವಾಸ್ತವಿಕ ಚಿತ್ರಣವಾಗಿದೆ.

**(ಆ) ಸಂಶೋಧನಾ ಕೃತಿಗಳು:**

ಇವರ ಒಂದು ಐತಿಹಾಸಿಕ ಸಂಶೋಧನಾ ಕೃತಿ [ತರೀಕೆರೆಯ ಪಾಳೆಗಾರರು ಮತ್ತು ಅವರ ಚರಿತ್ರೆ] ಎಂಬ ಐತಿಹಾಸಕ ಕೃತಿಯನ್ನು

[1] ಕರ್ನಾಟಕದ ಇತಿಹಾಸದಲ್ಲಿ ಒಕ್ಕಲಿಗರು [ಗೌಡರು]

[2] ಮಣಲಿ [ಹಿರೀಮರಳ]

[3] ವಿಷ್ಣುವರ್ಧನನ ನಾಲ್ಕು ಶಾಸನಗಳು.

[4] ಪಾಂಡವಪುರದ ಬೆಟ್ಟ ಮತ್ತು ಅದರ ಸ್ಮಾರಕಗಳು.

[5] ತೊಂಡನೂರು (ಕರಿಭಂಟ, ತೊಂಡನೂರು ರಾಕ್ಷಸಿ) ವಿಜಯ ಸಾಮ್ರಾಜ್ಯವು ಅಳಿದ ಮೇಲೆ ದಕ್ಷಿಣ ಭಾರತದಲ್ಲಿ ಆನೇಕ ಪಾಳೆಯ ಪಟ್ಟುಗಳು ತಲೆ ಎತ್ತಿದವು. ಸಾಮ್ರಾಜ್ಯದ ಹಿಡಿತವನ್ನು ಯಥಾಸ್ಥಿತಿಯಲ್ಲಿ ಇಟ್ಟುಕೊಳ್ಳಲು ವಿಜಯನಗರದ ಅರಸರು ಈ ಪಾಳೆಗಾರರನ್ನು ಸಾಮಾಂತರೆಂದು ಒಪ್ಪಿಕೊಂಡು ಅವರಿಂದ ನಿಗದಿತ ಕಪ್ಪ, ಯುದ್ಧ ಕಾಲದಲ್ಲಿ ಸೈನ್ಯದ ಸಹಾಯ ಮತ್ತಿತರ ಅವಶ್ಯಕತೆಗಳನ್ನು ಕಾಲಕಾಲಕ್ಕೆ ಪಡೆಯುತ್ತಿದ್ದರು. ಇಂತಹ ಅನೇಕ ಪಾಳೆಗಾರರು ಕರ್ನಾಟಕ ರಾಜ್ಯದಲ್ಲಿ ಹರಡಿಕೊಂಡಿದ್ದರು. ಇಂತಹವರಲ್ಲಿ ಚಿತ್ರದುರ್ಗ, ಹರಪನಹಳ್ಳಿ, ರಾಯದುರ್ಗಾ,ತರೀಕೆರೆ, ಬೇಲೂರು, ಬಿದನೂರು, ಜರೀಮಲೆ, ಗುಡಿಕೋಟೆ, ಮುಂತಾದ ಆನೇಕ ಚಿಕ್ಕ- ದೊಡ್ಡ ಪಾಳೆಗಾರರು ಇದ್ದರು ಈ ಪೈಕಿ ಸಾಮಾನ್ಯವಾಗಿ ಎಲ್ಲಾ ಪ್ರದೇಶಗಳ ಪಾಳೆಯಗಾರರಿಗೂ ಅವರದೇ ಆದ ಇತಿಹಾಸವು ಇದ್ದಿತು. ಈ ಪೈಕಿ ಅನೇಕ ಬಗೆಯ ತಾಪತ್ರೆಗಳಿಗೆ ಹಾಗೂ ತಮ್ಮ ಸ್ವಂತ ಜನರ ಕಿರುಕುಳಕ್ಕೆ ಗುರಿಯಾಗಿ ವಾರಸುದಾರರಿಲ್ಲದೇ ಕೊನೆಯಾದ ವಂಶ ತರೀಕೆರೆಯವರದ್ದು. ಇವರಿಗೆ ನೇರ ಸಂತಾನವು ಇಲ್ಲದೇ ಇದ್ದರೂ ದಾಯಾದಿಗಳು ಇದ್ದರು. ಈ ಸಂಸ್ಥಾನದ ಕೊನೆಯ ಪಾಳೆಯಗಾರನಾಗಿದ್ದ ಪಟ್ಟಾಭಿ, ಹನುಮಪ್ಪ ನಾಯಕನಿಗೆ ಚಿತ್ರದುರ್ಗದ ಯಶೋಧಮ್ಮ ನಾಗತಿ ಎಂಬ ಹೆಣ್ಣು ಮಗಳನ್ನು ಕೊಟ್ಟು ವಿವಾಹ

ಮಾಡಿದ್ದರು. ಈಕೆ ಮಹತ್ವಾಕಾಂಕ್ಷಿ, ಚಿತ್ರದುರ್ಗದವರೇ ಆಗಿದ್ದ ಹಾಗೂ ಪ್ರಖ್ಯಾತ ಕಾದಂಬರಿಕಾರರಾಗಿದ್ದ ತ.ರಾ.ಸು.ರವರನ್ನು ಕಂಡು ತಮ್ಮ ವಂಶಕ್ಕೆ ಇತಿಹಾಸವಿಲ್ಲ ನೀವು ಅದನ್ನು ಬರೆದು ಕೊಡಿ ಎಂಬುದಾಗಿ ಹೇಳಿ ತಮ್ಮಲ್ಲಿದ್ದ ಕೆಲವು ಮಾಹಿತಿಗಳನ್ನು ಅವರಿಗೆ ಕೊಟ್ಟರು. ಅಕಾಲದಲ್ಲಿ ತ.ರಾ.ಸು. ಚಿತ್ರದುರ್ಗಕ್ಕೆ ಸಂಬಂಧಿಸಿದಂತೆ ಅನೇಕ ಐತಿಹಾಸಿಕ ಕಾದಂಬರಿಗಳನ್ನು ಬರೆದು ಕೊನೆಯ ಕಾದಂಬರಿಯಾದ 'ದುರ್ಗಾಸ್ತಮಾನವನ್ನು' ರಚಿಸುತ್ತಾ ಇದ್ದರು. ಆಗ ಅವರ ಆಪ್ತರು ನಿಕಟ ವ್ಯಕ್ತಿಗಳು ಆಗಿದ್ದ ಶ್ರೀ ಅಬ್ದುಲ್ ಸತ್ತಾರ್ ಅವರು. ಅವರ ಮನೆಗೆ ಹೋಗುತ್ತಿದ್ದರು. ಇಂತಹ ಒಂದು ಸಂದರ್ಭದಲ್ಲಿ ಅಂದರೆ ದುರ್ಗಾಸ್ತಮಾನ ಬರೆದು ಮುಗಿಸಿದ ದಿನ. ತ.ರಾ.ಸು. ತೀರ ಬಳಲಿದ್ದರು. ಆ ದಿನ ಅವರು ಸತ್ತಾರ್ ಅವರನ್ನು ಕುರಿತು 'ಚಿತ್ರದುರ್ಗದ' ಮದಕರೀ ನಾಯಕನ ಋಣ ನನ್ನ ಮೇಲಿತ್ತು. ಆತ ನನ್ನ ಮೈ ತುಂಬಿಕೊಂಡು ದುಮುದಮಿಸುತ್ತ ಇದ್ದ . ಈವತ್ತು ಆತನ ಋಣ ಮತ್ತು ನನ್ನ ಊರಿನ ಋಣ ತೀರಿಸಿದ್ದೇನೆ. ಆದರೆ ಇನ್ನೊಂದು ಋಣ ನನ್ನ ಮೇಲಿದೆ. ನಾನು ತರೀಕೆರೆಯ ಪಾಳೆಗಾರರ ಇತಿಹಾಸ ಬರೆಯುತ್ತೇನೆ ಎಂದು ಯಶೋಧಮ್ಮ ನಾಗತಿಯವರಿಗೆ ಮಾತು ಕೊಟ್ಟಿದ್ದೇ ಆದರೆ ಅ ಕೆಲಸ ನನ್ನಿಂದ ಆಗಲಾರದು. ನಾನು ದೈಹಿಕವಾಗಿ ಬಹಳ ನಿತ್ರಾಣಗೊಂಡಿದ್ದೇನೆ. ನೀನು ಅ ಕೆಲಸವನ್ನು ಕೈಗೆತ್ತಿಕೊಂಡು ಮುಗಿಸು ಹಾಗೆಯೇ ಹೈದರಾಲಿ. ಬಹಳ ದೊಡ್ಡ ಮನುಷ್ಯ ಕರ್ನಾಟಕದ ಕೀರ್ತಿಯನ್ನು ಅಂತರಾಷ್ಟ್ರೀಯ ಮಟ್ಟಕ್ಕೆ ಏರಿಸಿದ ವ್ಯಕ್ತಿ. ಆತ ನಿನ್ನ ಜಿಲ್ಲೆಗೆ ಸೇರಿದವನು. ಅವನ ಋಣ, ನಿನ್ನ ಮೇಲಿದೆ. ಈತ ಹಾಗೂ ಅವನ ಮಗ ಟಿಪ್ಪುಸುಲ್ತಾನ್‌ನ ಬಗ್ಗೆ ಕಾದಂಬರಿಗಳನ್ನು ಬರೆದು ಈ ಋಣವನ್ನು ತೀರಿಸು. ಈ ಭಾರ ನಿನ್ನದು' ಎಂದು ಹೇಳಿದ್ದರು. ಮುಂದೆ ಅನಾರೋಗ್ಯ ಪೀಡಿತರಾಗಿ ಅವರ ಮನೆಯ ಸಮೀಪದಲ್ಲೆ ಇದ್ದ ಸಂಕಲ್ಪ ನರ್ಸಿಂಗ್ ಹೋಂ. ಗೆ ಸೇರಿ ತೀವ್ರವಾಗಿ ಖಾಯಿಲೆಗೆ ತುತ್ತಾಗಿ ವಿಧಿವಶರಾದರು. ಇದಾದ ನಂತರ .

ಅಬ್ದುಲ್ ಸತ್ತಾರ್ ಅವರು ಹಾಗೂ ತ.ರಾ.ಸು. ರವರ ಒಬ್ಬರು ಸಹಾಯಕರಾಗಿದ್ದ ನಾ.ಪ್ರಭಾಕರ, ತ.ರಾ.ಸು. ರವರ ಮನೆಗೆ ಹೋದಾಗ 3.4 ದಾಖಲೆಗಳನ್ನು ಕೊಟ್ಟು ತರೀಕೆರೆಯ ಪಾಳೆಗಾರರ ಇತಿಹಾಸದ ಕೆಲಸವನ್ನು ಕೈಗೊಳ್ಳಬೇಕೆಂದು ಅಂಬುಜಮ್ಮನವರು ಹೇಳಿಕೊಂಡರು. ಇವರು ಈ ಕೆಲಸವನ್ನು ಕೈಗೆ ಎತ್ತಿಕೊಂಡು ಅದರ ಬಗ್ಗೆ ಮೈಸೂರಿನ ಮಾನಸ ಗಂಗೋತ್ರಿಗೆ ಹೋಗಿ ಅಲ್ಲಿ ದೊರೆತ ದಾಖಲೆಗಳನ್ನೆಲ್ಲ ಪ್ರತಿ ಮಾಡಿಕೊಂಡು ಬಂದರು. ಅ ಮೇಲೆ ಅವುಗಳ ಕೆಲಸ ಕೈಗೆತ್ತಿಕೊಂಡರು. ಈ ವಂಶಕ್ಕೆ ಸೇರಿದ ನಾಯಕರು ಮೊದಲಿಗೆ ಬಸವಪಟ್ಟಣದಲ್ಲಿದ್ದು. ಅಲ್ಲಿಂದ ಸಂತೆಬೆನ್ನೂರಿಗೆ ಬಂದು. ಅಲ್ಲಿಂದ ತರೀಕೆರೆಗೆ ಬರುತ್ತಾರೆ. ಈ ವಂಶದಲ್ಲಿ ಒಟ್ಟು 15 ನಾಯಕರು ಎಂದರೆ ಹನುಮ ನಾಯಕನಿಂದ ಕೊನೆಯ ಸರ್ಜಾ ಹನುಮಪ್ಪ ನಾಯಕನ ತನಕ 15 ಜನ ಆಳ್ವಿಕೆ ನಡೆಸಿದ್ದಾರೆ. ಈ ಪೈಕಿ 9 ಜನ

ಸಂತೆ ಬೆನ್ನೂರಿನಿಂದ ಆಳ್ವಿಕೆ ನಡೆಸುತ್ತಾರೆ. ಉಳಿದ 6 ಜನ ತರೀಕೆರೆಯಿಂದ ಆಳ್ವಿಕೆ ನಡೆಸುತ್ತಾರೆ. ಇದು ಚಿತ್ರದುರ್ಗದ ನಂತರ ಆಳಿದ ಅತ್ಯಂತ ಸಮರ್ಥ ರಾಜವಂಶ. ಇವರಿಗೆ ಅವರ ಸಮಕಾಲೀನರಾಗಿದ್ದ ಬಿಜಾಪುರದ ಸುಲ್ತಾನರು. ಮೈಸೂರಿನ ಒಡೆಯರು. ಕೆಳದಿಯ ನಾಯಕರು, ಶೀರಾದ ನಾಯಕರು. ಚಿತ್ರದುರ್ಗ ನಾಯಕರು. ಮುಂತಾದವರ ಜೊತೆಗೆ ಆಗಾಗ ಸಂಘರ್ಷಣೆಗಳು ನಡೆಯುತ್ತಲೇ ಇದ್ದವು ಇವರಲ್ಲಿ ಅನೇಕರು ದೈವ ಭಕ್ತರು ಸಾಹಸಿಗಳು ಆಗಿದ್ದರು. ಈ ವಂಶದಲ್ಲೇ ಒಬ್ಬ ತೀರ ಉಲ್ಲಾಸ ಸ್ವಾಭಾವದ ನಾಯಕ ಆಗಿದ್ದಾನೆ. ಆತನನ್ನು ನಿಶ್ಚಮದುವಣಿಗ. ಹನುಮಿನಾಯಕ ಎಂದು ಕರೆಯುತ್ತಿದ್ದರು. ಇತನದು ವಿಲಾಸಿ ಜೀವನ . ಸಂತೆ ಬೆನ್ನೂರಿನಲ್ಲಿ ಈ ನಾಯಕರು ಆಳುತ್ತಿದ್ದಾಗ. ಅಲ್ಲಿ ಆಳ್ವಿಕೆ ನಡೆಸುತ್ತಿದ್ದ ಹಿರಿಯ ಕೆಂಗಹನುಮಪ್ಪ ನಾಯಕನ ಕಾಲದಲ್ಲಿ ಬಿಜಾಪುರದ ಮಹಾಸೇನಾನಿ ರಣದುಲ್ಲಾಖಾನ್ ಎಂಬಾತ ಒಂದು ಬಹುದೊಡ್ಡ ಸೈನ್ಯದೊಂದಿಗೆ ಈ ಕಡೆ ದಂಡೆಯಾತ್ರೆ ಮಾಡುತ್ತಾನೆ. ಆತನಿಗೆ ಆಪ್ತನಾಗಿ ಈ ಹಿರಿಯ ಕೆಂಗಹನುಮಪ್ಪ ನಾಯಕ ಸೈನ್ಯ ಸಮೇತ ಹೊರಡುತ್ತಾನೆ. ಈ ಸಂಯುಕ್ತ ಸೇನೆ ದಾರಿಯಲ್ಲಿದ್ದ ಅನೇಕ ಚಿಕ್ಕ-ಚಿಕ್ಕ ಪಾಳೆಗಾರರನ್ನು ಸೋಲಿಸುತ್ತ ಶ್ರೀರಂಗಪಟ್ಟಣದ ಮೇಲೆ ದಂಡೆತ್ತಿ ಬರುತ್ತಾರೆ. ಆಗ ಶ್ರೀರಂಗಪಟ್ಟಣದಲ್ಲಿ ಕಂಠೀರವ ನರಸರಾಜ ಒಡೆಯರು. ಆಳ್ವಿಕೆ ನಡೆಸುತ್ತಾ ಇರುತ್ತಾರೆ ಇವರದ್ದು ಬಹಳ ಅಲ್ಪ ಸೇನೆ ಆದರೆ ಚಾಣಕ್ಷಮತಿಯಾದ ನರಸರಾಜ ಶ್ರೀರಂಗಪಟ್ಟಣವನ್ನು ತ್ಯಜಿಸಿ ತಮ್ಮ ಸೈನ್ಯವನ್ನು ಚಿಕ್ಕ-ಚಿಕ್ಕ ತುಕಡಿಗಳಾಗಿ ಮಾಡಿ ಅಲ್ಲಲ್ಲೆ ಅವಿತುಕೊಂಡು ಕೂಟ ಯುದ್ಧಕ್ಕೆ ಪ್ರಾರಂಭ ಮಾಡುತ್ತಾರೆ. ತಮ್ಮ ಪ್ರದೇಶದ ಜನಗಳಿಗೆ ಯುದ್ಧವು ಸಮಾಪ್ತಿಯಾಗುವವರೆಗೆ ಆಹಾರ ಮತ್ತು ಜಾನುವಾರುಗಳ ಸಹಿತ ಅರಣ್ಯಗಳಿಗೆ ಹೋಗಿ ಇರಬೇಕೆಂದು ಸಲಹೆ ಕೊಟ್ಟಿರುತ್ತಾರೆ. ಅದೇ ರೀತಿ ಪ್ರಜೆಗಳು ತಮ್ಮ ಮನೆ ಮಠ ಖಾಲಿ ಮಾಡಿ ಆಹಾರ ಧಾನ್ಯ ಜಾನುವಾರುಗಳ ಸಮೇತ ಕಾಡುಗಳಿಗೆ ವಲಶೆ ಹೋಗುತ್ತಾರೆ.

ರಣದುಲ್ಲಾಖಾನ್ ಜೊತೆಯಲ್ಲಿ ಸುಮಾರು ಎರೆಡು ಲಕ್ಷದ ಸೈನ್ಯ ಇರುತ್ತದೆ. ಇದಕ್ಕೆ ಬೇಕಾದ ಆಹಾರ ಧಾನ್ಯ, ಹಾಗೂ ಜಾನುವಾರುಗಳಿಗೆ ಬೇಕಾದ ಹುಲ್ಲು, ಮೇವು ಸರಿಯಾಗಿ ದೊರೆಯುವುದಿಲ್ಲ. ನರಸರಾಜನ ಸೈನ್ಯದ ಜೊತೆ ಕೆಲವು ಸಲ ಸಂಘರ್ಷಣೆ ನಡೆದು ಅದರಲ್ಲೂ ದಿಕ್ಕು ತಪ್ಪುತ್ತಾರೆ. ಒಮ್ಮೆ ಒಂದು ದೊಡ್ಡ ಹೋರಾಟದಲ್ಲಿ ಗೆಲ್ಲುತ್ತಾನೆ. ಇದರಿಂದ ಬೇಸರಗೊಂಡ ಬಿಜಾಪುರದ ಸೈನ್ಯ ಹಿಂತೆರೆಳುತ್ತದೆ. ನರಸರಾಜರ ಜೊತೆ ಒಪ್ಪಂದ ಮಾಡಿಕೊಳ್ಳುತ್ತಾರೆ. ಇದಾದ ಮೇಲೆ ರಣದುಲ್ಲಾಖಾನ್‌ನಿಗೆ ಈ ಸೋಲಿಗೆ ತರೀಕೆರೆಯ ಪಾಳೆಗಾರರ ಕುತಂತ್ರವು ಕಾರಣ ಎಂದು ತಿಳಿದು ಬಂದಾಗ ಆತ ಅಲ್ಲಿಂದ ತಿರುಗಿ ಸಂತೆ ಬೆನ್ನೂರಿನ ಮೇಲೆ ಧಾಳಿ ಮಾಡಿ ಕೆಂಗಹನುಮಪ್ಪ ನಾಯಕನನ್ನು ಸೆರೆಹಿಡಿದು ಬಿಜಾಪುರಕ್ಕೆ ಹಿಂತಿರುಗುತ್ತಾನೆ. ಹಾಗೂ ನಾಯಕನನ್ನು ಸೆರೆಯಲ್ಲಿಡುತ್ತಾರೆ. ಎರಡು ವರ್ಷದ ನಂತರ

ನಾಯಕನ ತಮ್ಮ ಚಿಕ್ಕ ಕೆಂಗಹನುಮಪ್ಪ ನಾಯಕ ಬಿಜಾಪುರಕ್ಕೆ ಹೋಗಿ ಅಲ್ಲಿನ ಸುಲ್ತಾನನ್ನು ತನ್ನ ಮಲ್ಲಯುದ್ಧ ಪಟುತ್ವಗಳಿಂದ ತೃಪ್ತಿಗೊಳಿಸುತ್ತಾನೆ. ಹಾಗೂ ತನ್ನ ಅಣ್ಣನನ್ನು ಬಿಡುಗಡೆ ಮಾಡಬೇಕೆಂದು ಸುಲ್ತಾನ್‌ನನ್ನು ಕೇಳುತ್ತಾನೆ. ಈತನಿಗೆ ಸರ್ಜಾ ಎಂಬ ಬಿರುದನ್ನು ಕೊಟ್ಟು ಇವನ ಅಣ್ಣನನ್ನು ಬಿಡುಗಡೆ ಮಾಡಿ ಕೆಲವು ಬಹುಮಾನಗಳನ್ನು ನೀಡಿ ಇವನ ರಾಜ್ಯವನ್ನು ಹಿಂದಕ್ಕೆ ಕೊಡುತ್ತಾನೆ. ಅಲ್ಲಿಂದ ಈ ವಂಶ ಸರ್ಜಾ ಎಂಬ ಬಿರುದನ್ನು ಧರಿಸುತ್ತದೆ. ಬಿಜಾಪುರದಿಂದ ಹಿಂತುರಿಗಿ ಈ ನಾಯಕರು ತಮ್ಮ ಆಳ್ವಿಕೆಯನ್ನು ತರೀಕೆರೆಯಿಂದ ಪ್ರಾರಂಭ ಮಾಡುತ್ತಾರೆ. ಹಾಗೂ ಅತ್ಯಂತ ವಿಚಕ್ಷಣತೆಯಿಂದ ಅಳ್ವಿಕೆ ನಡೆಸುತ್ತಾರೆ. ಇವರ ಮೇಲೆ ಮೈಸೂರಿನ ಹೈದರಾಲಿ 1762ರ ಕಾಲದಲ್ಲಿ ಧಾಳಿ ಮಾಡಿ ಇವರನ್ನು ಸೋಲಿಸುತ್ತಾನೆ. ಹಾಗೂ ತನ್ನ ಸಾಮಂತರನ್ನಾಗಿ ಇಟ್ಟುಕೊಳ್ಳಲು ಪ್ರಯತ್ನಿಸುತ್ತಾರೆ. ಮುಂದೆ ಈ ವಂಶದಲ್ಲಿ ಸರ್ಜಾ ರಂಗಪ್ಪನಾಯಕ ಆಳುತ್ತಿದ್ದಾಗ. ಶ್ರೀರಂಗಪಟ್ಟಣ ಬ್ರಿಟಿಷರ ವಶವಾಗುತ್ತದೆ. ಬ್ರಿಟಿಷರು ಇವರ ಆಳ್ವಿಕೆಯನ್ನು ಕೊನೆಗೊಳಿಸುತ್ತಾರೆ. ಸರ್ಜಾ ರಂಗಪ್ಪನಾಯಕನನ್ನು ಹಿಡಿಸು ಮೈಸೂರಿನಲ್ಲಿ ಸೆರೆಯಲ್ಲಿ ಇರಿಸುತ್ತಾರೆ. ಆದರೆ ಸಾಹಸಿಯಾದ ನಾಯಕ ಬಂಧಿಖಾನೆಯಿಂದ ಕೆಲವು ಆಪ್ತಕ ಸಹಾಯದಿಂದ ಹಾರಿ ತಪ್ಪಿಸಿ ಕೊಳ್ಳುತ್ತಾನೆ. ಮುಂದೆ ಇವನನ್ನು ಬೆನ್ನಟ್ಟಿದ ಬ್ರಿಟಿಷ್ ಸೈನ್ಯ ಮತ್ತು ಒಡೆಯರ ಸೈನ್ಯದ ಜೊತೆ ಹೋರಾಡುತ್ತ ರಂಗಪ್ಪನಾಯಕ ಗುಂಡೇಟಿಗೆ ಗುರಿಯಾಗುತ್ತಾನೆ. ಅವನ ನಂತರ ಇವನ ಮಗ ಸರ್ಜಾ ಹನುಮಪ್ಪನಾಯಕ ಕಾಮನ ದುರ್ಗಾ ಮತ್ತು ಕಲ್ಲುದುರ್ಗ, ಎಂಬ ಎರೆಡು ಕಡೆ ಕೇಂದ್ರ ಮಾಡಿಕೊಂಡು ತನ್ನ ಸ್ನೇಹಿತರು ನಿಷ್ಠರು ಅವರೊಂದಿಗೆ ಸೇರಿಕೊಂಡು ಈ ಹೋರಾಟಕ್ಕೆ ನಿಲ್ಲುತ್ತಾರೆ. ಈತ ಇಂಗ್ಲೀಷ್ ಮತ್ತು ಮೈಸೂರು ಸೈನ್ಯಗಳನ್ನು ಎರೆಡು ಬಾರಿ ಸೋಲಿಸುತ್ತಾನೆ. ಹಾಗೂ ಅವರ ಮೇಲೆ ಕೂಟ ಯುದ್ಧಗಳನ್ನು ಕೈಗೊಳ್ಳುತ್ತಾನೆ. ಹಾಗೂ ಬ್ರಿಟಿಷರು ಕೆಲವು ಅಮೀಲರ ಸಹಾಯದಿಂದ ಪಿತೂರಿಯನ್ನು ನಡೆಸುತ್ತಾರೆ. ಇದರಲ್ಲಿ ಪ್ರಮುಖರಾದವರು ಅಮೀಲಗೋವಿಂದರಾಯ ಮತ್ತು ವೆಂಕಟ ಸುಬ್ಬಯ್ಯ ಈ ಅಮೀಲರು ತಮ್ಮ ಸ್ನೇಹಿತರ ಜೊತೆಯಿಂದ ಹೂವಿನಹಳ್ಳಿ ಎಂಬ ಗ್ರಾಮದಲ್ಲಿದ್ದ ಹನುಮಪ್ಪನಾಯಕನ ಪ್ರೇಯಸಿ ರಂಗಮ್ಮನನ್ನು ಒಲಿಸಿ ಆಕೆಗೆ ಹಣ. ಜಾಹಗೀರ್, ಸನದು. ಎಲ್ಲವನ್ನು ಕೊಡುತ್ತೇವೆ. ಎಂದು ವಾಗ್ದಾನ ಮಾಡಿ ತಮ್ಮ ಕಡೆಗೆ ಸೇರಿಸಿಕೊಳ್ಳುತ್ತಾರೆ. ಇದಕ್ಕೆ ಸಮ್ಮತಿಸಿ ರಂಗಮ್ಮ ನಾಯಕನಿಗೆ ವಿಷಪೂರಿತ ಆಹಾರವನ್ನು ಕೊಟ್ಟು ಆತ ಪ್ರಜ್ಞಾ ಹೀನಾನಾದಾಗ ಅದರ ಸುಳಿವನ್ನು ಆಂಗ್ಲರಿಗೆ ತಲುಪಿಸುತ್ತಾಳೆ. ಅವರ ಸೈನ್ಯ ಇವನಿದ್ದ ಮನೆಯನ್ನು ಮುತ್ತುತ್ತದೆ. ಹೋರಾಟ ನಡೆದು ಗಾಯಗೊಂಡ ನಾಯಕ ಸೆರೆ ಸಿಗುತ್ತಾನೆ. ಇವನನ್ನು ಬೆಂಗಳೂರಿಗೆ ಸಾಗಿಸಿ ಸೆರೆಯಲ್ಲಿಡುತ್ತಾರೆ. ನೀನು ಸಾಮಾಂತನೆಂದು ಒಪ್ಪಿಕೋ ನಿನ್ನನ್ನು ಬಿಡುಗಡೆ ಮಾಡಿ ನಿನ್ನ ರಾಜ್ಯವನ್ನು ಹಿಂತುರುಗಿಸುತ್ತೇವೆ. ಎಂದು ಆಗಿನ ಕಮೀಷನರ್ ಹೇಳಿದರು. ಅದಕ್ಕೆ ಒಪ್ಪದೇ

ಗಲ್ಲಿಗೇ ಏರಲು ಸಿದ್ದನಾಗುತ್ತಾನೆ. ಹೀಗೆ ತನ್ನ ದೇಶಕೋಸ್ಕರ ಸರ್ಜಾಪ್ಪನಾಯಕ ಪ್ರಾಣಾರ್ಪಣೆ ಮಾಡುತ್ತಾನೆ. ಈತ ನಾಯಕ ಜನಾಂಗದ ಪೈಕಿ ಒಬ್ಬ ಅಸೀಮ ದೇಶಭಕ್ತ. ಹಾಗೂ ಸಾಹಸಿ. ಇಲ್ಲಿಗೆ ತರೀಕೆರೆಯ ಪಾಳೆಗಾರರ ವಂಶ ಕೊನೆಗೊಳ್ಳುತ್ತದೆ. ಈ ನಾಯಕರನ್ನು ಕುರಿತು ಸತ್ತಾರ್‌ರವರು ಒಂದು ಇತಿಹಾಸವನ್ನು ಬರೆದು ಆ ವಂಶಕ್ಕೆ ಕೈತಪ್ಪಿ ಹೋಗಿದ್ದ ಇತಿಹಾಸವನ್ನು ಸೃಷ್ಠಿಸಿ ಕೊಟ್ಟಿದ್ದಾರೆ.

**II. ಐತಿಹಾಸಿಕ ಲೇಖನೆಗಳು :-** ಇವರು ಕರ್ನಾಟಕದ ಜನ ಸಮುದಾಯದಲ್ಲಿ ಒಂದು ಪ್ರಮುಖ ಪಂಗಡವಾಗಿ ಬಹಳ ಕಾಲದಿಂದ ಅದರ ಅಗು ಹೋಗುಗಳಲ್ಲಿ ತೊಡಗಿ ಕೊಂಡಿದ್ದ ಒಕ್ಕಲಿಗ ಜನಾಂಗದ ಬಗ್ಗೆ ವಿಶೇಷವಾದ ಒಲವನ್ನು ಪಡೆದಿದ್ದರು. ಇವರ ಗ್ರಾಮಾಂತರ ಹಿನ್ನಲೆ ಇದಕ್ಕೆ ಪ್ರಮುಖ ಕಾರಣ. ಇವರು ತಮ್ಮ ಬರವಣಿಗೆಯಲ್ಲಿ ತೊಡಗಿಕೊಂಡಾಗ ಇವರಿಗೆ ಕಂಡು ಬಂದ ಅನೇಕ ಸಂಗತಿಗಳನ್ನು ಟಿಪ್ಪಣಿ ಮಾಡಿಕೊಂಡು ಆನಂತರ ಈ ಜನಾಂಗದ ಬಗ್ಗೆ ಮತ್ತು ಅವರ ಐತಿಹಾಸಿಕ ಚಟುವಟಿಕೆಗಳ ಬಗ್ಗೆ ಒಂದು ಲೇಖನವನ್ನೇ ಬರೆದು ಮೈಸೂರು ವಿಶ್ವ ವಿದ್ಯಾನಿಲಯದನಿಂದ ಪ್ರಕಟವಾಗುತ್ತಿದ್ದ ಪ್ರಭುದ್ಧ ಕರ್ನಾಟಕದಲ್ಲಿ ಪ್ರಕಟಣೆ ಮಾಡಿಸಿದರು.

ಇವರ ಪ್ರಕಾರ ಒಕ್ಕಲಿಗರು ಕರ್ನಾಟಕದಲ್ಲಿ ಆಳ್ವಿಕೆಯನ್ನು ನಡೆಸಿದ ಐತಿಹಾಸಿಕ ಕಾಲದ ಒಂದು ಜನಾಂಗವಾಗಿದ್ದಾರೆ. ಇವರು ಮೊದಲಿಗೆ ಕೋಲಾರ ಜಿಲ್ಲೆಯಲ್ಲಿ [ಚಿಕ್ಕಗಂಗಾವಾಡಿಯಲ್ಲಿ] ಮತ್ತು ಪಕ್ಕದ ಮಲೆಯಿ ಮಹಪಾಡಿಯಲ್ಲಿ ಆಳ್ವಿಕೆಯನ್ನು ನಡೆಸಿದ್ದಾರೆ. ಪ್ರಾರಂಭದಲ್ಲಿ ಇವರು ಗಂಗ ವಂಶದ ರಾಜರಲ್ಲೊಬ್ಬನಾದ ಹರಿವರ್ಮನ ಸಮಾಂತರಾಗಿದ್ದು ಕೊಂಡು ಆಳ್ವಿಕೆ ನಡೆಸಿದ್ದಾರೆ. ಅನಂತರ ಇವರು ಕೋಲಾರ ಜಿಲ್ಲೆಯಿಂದ ಮುಂದುವರಿದು ಬೆಂಗಳೂರು ಜಿಲ್ಲೆಯ ಯಲಹಂಕ. ಮಾಗಡಿ ಪ್ರದೇಶಗಳನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡಿದ್ದಾರೆ. ಆಗ. ಇವರನ್ನು ಅವತಿನಾಡಿನ ಪ್ರಭುಗಳು ಎಂದು ಗುರುತಿಸುತ್ತಿದ್ದರು. ಇವರು ಮಾಗಡಿ. ಯಲಹಂಕ.ಮುಂತಾದ ಕಡೆ ಆಳ್ವಿಕೆ ನಡೆಸಿದ್ದಾರೆ. ಈ ವಂಶದ ಇಮ್ಮಡಿ ಕೆಂಪೇಗೌಡ ಬೆಂಗಳೂರನ್ನು ಆಳ ಅದರ ನಾಲ್ಕು ಮೇರೆಗಳನ್ನು ಗುರುತಿಸಿದ್ದಾರೆ. ಆನಂತರ ಈ ರಾಜರು ತಮ್ಮಲ್ಲಿ ಅನೇಕ ಗುಂಪುಗಳಾಗಿ ಹರಡಿಕೊಮಡರು. ಇವರ ಕೊನೆಯ ರಾಜನನ್ನು ಮೈಸೂರಿನ ದಳವಾಯಿ ದೇವರಾಜಯ್ಯ ಸೆರೆ ಹಿಡಿದು ತಂದು .ಶ್ರೀರಂಗಪಟ್ಟಣದಲ್ಲಿ ಸೆರೆಯಲ್ಲಿಟ್ಟನು. ಈತ ಒಂದು ಮಾಗಡಿ ಕಡೆಯಿಂದ ಮತ್ತೊಂದು ಕಡೆ ಹುಲಿಯೂರು ದುರ್ಗಾದ ಗೌಡ ಪ್ರಭುಗಳ ಕೊನೆಯ ಕೊಂಡಿಯಾಗಿದ್ದ ಕೆಂಪನಂಜಪ್ಪಗೌಡ. ಈತ ಶ್ರೀರಂಗಪಟ್ಟಣದ ಸೆರೆಮನೆಯಲ್ಲಿ ಕಾಲವಾದನು.

1. ಗೌಡ ಪ್ರಭುಗಳು ಡಿ. ಹೊಳವನ ಹಳ್ಳಿ, ಗುಬ್ಬಿ.ಚಿಕ್ಕ ನಾಯಕನ ಹಳ್ಳಿ. ಮುಂತಾದ ಕಡೆ ಆಳ್ವಿಕೆ ನಡೆಸಿದ್ದಾರೆ. ಮತ್ತು ಬೆಂಗಳೂರು ಕೋಲಾರ ಜಿಲ್ಲೆಗಳ. ಶಿಡ್ಲಘಟ್ಟ. ಅನೇಕಲ್. ಹೊಸೂರು.

ಮುಂತಾದ ಕಡೆಯು ಆಳ್ವಿಕೆ ನಡೆಸಿದ್ದಾರೆದ. ಈ ಎಲ್ಲಾ ಮಾಹಿತಿಗಳನ್ನು ಶೇಖರಿಸಿ ಈ ಲೇಖನವನ್ನು ಸತ್ತಾರ್ ಅವರು ಬರೆದು ಪ್ರಭುದ್ಧ ಕರ್ನಾಟಕದಲ್ಲಿ ಪ್ರಕಟಣೆ ಮಾಡಿಸಿದ್ದಾರೆ.

2) ಚಿತ್ರದುರ್ಗದಲ್ಲಿ ಆಳ್ವಿಕೆ ನಡೆಸಿದ ನಾಯಕ ಜನಾಂಗದ ಬಗ್ಗೆ ಕೆಲವು ಸಮಸ್ಯೆಗಳನ್ನು ಕುರಿತು ಇವರು ಚಿತ್ರದುರ್ಗದ ಕಾಮಗೆತ್ತಿ. ಅರಸರು ಒಂದು ವಿಶ್ಲೇಷಣೆ ಎಂಬ ಹೆಸರಿನ ಲೇಖನ ಬರೆದಿದ್ದಾರೆ. ಇದರಲ್ಲಿ ಚಿತ್ರದುರ್ಗದಲ್ಲಿ ಆಳಿದ ಕೊನೆಯ ನಾಯಕ ಮದಕರೀ ನಾಯಕನ ಬಗ್ಗೆ ಕಂಡು ಬಂದ ಕೆಲವು ಐತಿಹಾಸಿಕ ಸಮಸ್ಯೆಗಳನ್ನು ಕುರಿತು ಚರ್ಚಿಸಿದ್ದಾರೆ. ಹಾಗೆಯೇ ಈ ವಂಶದ ಕಸ್ತೂರಿ ರಂಗಪ್ಪನಾಯಕ ಮತ್ತು ದೊಡ್ಡ ಮದಕರೀ ನಾಯಕನ ಜೀವನಗಳ ಬಗ್ಗೆ ಕಂಡು ಬಂದ ಕೆಲವು ಅಂಶಗಳ ಬಗ್ಗೆ ತಮ್ಮದೇ ರೀತಿಯಲ್ಲಿ ವಿಶ್ಲೇಷಣೆಯನ್ನು ಮಾಡಿದ್ದಾರೆ. ಈ ಲೇಖನವು ಪ್ರಭುದ್ಧ ಕರ್ನಾಟಕದಲ್ಲಿ ಪ್ರಕಟವಾಯಿತು.

3)ವಿಷ್ಣುವರ್ಧನ ಹೊಯ್ಸಳರಲ್ಲಿ ಪ್ರಸಿದ್ಧನಾದ ರಾಜ. ಆತನ ಕಾಲದಲ್ಲಿ ವಿಶಿಷ್ಟಾದ್ವೈತ ಮತದ ಸ್ಥಾಪಕರಾದ ಶ್ರೀ ರಾಮಾನುಜಾ ಚಾರ್ಯರು. ಶ್ರೀರಂಗದಿಂದ ಹೊರಟು ಮೊದಲು ಸಾಲಿ ಗ್ರಾಮಕ್ಕೆ ಬಂದು ಅಲ್ಲಿಂದ ತೊಂಡನೂರಿಗೆ ಬಂದರು. ಆಕಾಲದಲ್ಲಿ ಕರ್ನಾಟಕದಲ್ಲಿ ವಿಷ್ಣುವರ್ಧನನ ರಾಜ್ಯಭಾರ ಇದ್ದಿತು. ಈತ ಹಳೇಬೀಡಿನಲ್ಲಿ ಆಳುತ್ತಿದ್ದ. ಇವನು ತನ್ನ ರಾಜ್ಯದಲ್ಲಿದ್ದ ಎಲ್ಲಾ ಧರ್ಮಗಳಿಗೂ ಪ್ರೋತ್ಸಾಹ ಕೊಡುತ್ತಿದ್ದ. ಎಲ್ಲಾ ಕಲೆಗಳನ್ನು ಅಭಿವೃದ್ಧಿ ಪಡಿಸಿದ್ದ ನಾಟ್ಯರಾಣಿ ಎಂದು ಹೆಸರುವಾಸಿಯಾದ ಶಾಂತಲಾದೇವಿ ಇವನ ಮೊದಲನೆಯ ಪತ್ನಿ ಈತನನ್ನು ರಾಮಾನುಜಾಚಾರ್ಯರು ಭೇಟಿಯಾಗಿ ತಮಗೆ ಸಹಾಯ ಮಾಡಬೇಕೆಂದು ಕೇಳಿಕೊಂಡರು. ಅವರ ಶಿಷ್ಯರಿಗೆ ಮೇಲುಕೋಟೆ ಮತ್ತು ತೊಂಡನೂರುಗಳಲ್ಲಿ ಇರಲು ಅವಕಾಶಕೊಟ್ಟನು. ಮತ್ತು ಅವರ ಇಷ್ಟದ ಪ್ರಕಾರ ಈ ಊರುಗಳಲ್ಲಿ ದೇವಾಲಯಗಳನ್ನು ವೃತ್ತಿಯಾಗಿ ಭೂಮಿಯನ್ನು ಕೊಟ್ಟನು. ಈ ಭೂಮಿಯನ್ನು ಸಂಪೂರ್ಣವಾಗಿ ಅವರ ಉಪಯೋಗಕ್ಕೆ ಬಿಟ್ಟು ಕೊಟ್ಟನು. ಅಚಾರ್ಯರು ಈ ಭೂಮಿಯನ್ನು ತನ್ನ ಶಿಷ್ಯರಿಗೆ ಹಂಚಿ ಅದರಿಂದ ಬರುವ ಆದಾಯವನ್ನು ಅವರೇ ಪಡೆದು ಧರ್ಮಸೇವೆ ಮಾಡಬೇಕೆಂದು ಗೊತ್ತುಪಡಿಸಿದರು. ಇಂತಹ ಶಿಷ್ಯರಿಗೆ ಹೆಬ್ಬಹಾರುವರು [ಹೆಬ್ಬಾರ್] ಎಂದು ಕರೆಯುತ್ತಾರೆ. ತೊಂಡನೂರಿನಿಂದ ಕನ್ನಂಬಾಡಿಯ ತನಕ ಹಾಗೂ ಬೂಕನಕೆರೆಯವರೆಗೆ ಅನೇಕ ಪ್ರದೇಶಗಳು ಈ ಹೆಬ್ಬಾರರಿಗೆ ಕೊಡಲ್ಪಟ್ಟವು. ಆಕಾಲದಲ್ಲಿ ವಿಷ್ಣುವರ್ಧನ ರಾಜಕೀಯವಾಗಿ ಆತನ ಕಾರ್ಯಕರ್ತನಾಗಿದ್ದ ಕಾಮಯ್ಯ ನಾಯಕನ ಮೂಲಕ ಮಣಲಿಯ ಇಂದ (ಹಿರೀಮರಳ)ಯಿಂದ ಆಳ್ವಿಕೆ ನಡೆಸುತ್ತಿದ್ದನು. ಈತನಿಗೆ ಆರುಜನ ಪತ್ನಿಯರು ಇದ್ದರು. ಆ ಕಾಲದ ಎಲ್ಲಾ ಪ್ರಮುಖ ರಾಜವಂಶಗಳಿಗೂ ಸೇರಿದ ಅರಸುಕುವರಿಯರು ಈತನಿಗೆ ಪತ್ನಿಯರಾಗಿದ್ದರು. [ಬೊಮ್ಮಲಾದೇವಿ, ರಾಜಲಾದೇವಿ, ದೇವಿಕಿದೇವಿ, ಇವರು

ರಾಜಕುವರಿಯರು] ಇವರಲ್ಲದೇ ಹಿರಿಯ ಶಾಂತಲೆ, ಕಿರಿಯ ಶಾಂತಲೆ ಎಂಬ ಇಬ್ಬರು ಸಾಮಾನ್ಯ ವರ್ಗಕ್ಕೆ ಸೇರಿದ್ದರು. ವಿಷ್ಣುವರ್ಧನನಿಗೆ ಪರಂಪರಾಗತವಾಗಿ ದ್ವೇಷಿಗಳಾಗಿ ಇದ್ದವರು. ಚೆಂಗಾಳ್ವರು ಮತ್ತು ಕೊಂಗಾಳ್ವರು ಅವರ ಮೇಲೆ ಪದೇ-ಪದೇ ಯುದ್ಧಗಳು ನಡೆಯುತ್ತಿದ್ದು ಈ ಯುದ್ಧದಲ್ಲಿ ವಿಷ್ಣುವರ್ಧನನ ಹಿರಿಯ ಮಗ ನೃಪಭೂಪ ಎಂಬಾತ ಮಡಿದನು. ಆಗ ರಾಜ್ಯಕ್ಕೆ ವಾರಸುದಾರರು ಇಲ್ಲವಾಗುತ್ತಾರೆ. ಎಂಬ ಶಂಕೆಯಿಂದ ವಿಷ್ಣುವರ್ಧನ ತೊಂಡನೂರಿನ ಹತ್ತಿರದಲ್ಲೆ ಇದ್ದ ಪ್ರದೇಶಕ್ಕೆ ಸೇರಿದ್ಧ ವೈಷ್ಣವಜಾತಿಯ ಲಕ್ಷ್ಮೀಮಹಾದೇವಿಯನ್ನು ಮದುವೆಯಾದ ಆಕೆಯಲ್ಲಿ ಈತನಿಗೆ 'ನರಸಿಂಹ' ಎಂಬ ಮಗನು ಜನಿಸಿದನು. ಮುಂದೆ ಈತನಿಂದ ಹೊಯ್ಸಳ ವಂಶ ಮುಂದುವರಿಯಿತು. ಇದರ ನಂತರ ವಿಷ್ಣುವರ್ಧನ ರಾಜಕೀಯ ಕಾರಣಕ್ಕಾಗಿ ಕೊಂಗಾಳ್ವ ವಂಶದ ಚಂದಲ ದೇವಿಯನ್ನು ಮದುವೆಯಾದ. ಈಕೆ ಈತನ ಏಳನೇಪತ್ನಿ ಈ ವಿಷಯಗಳನ್ನು ಕುರಿತು ಇವರು ತಮ್ಮ ವಿಷ್ಣುವರ್ಧನನ ನಾಲ್ಕು ಶಾಸನಗಳು ಎಂಬ ಲೇಖನದಲ್ಲಿ ಪ್ರಸ್ತಾಪಮಾಡಿದ್ದಾರೆ. ಇದು ಕೂಡ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಈ ಲೇಖನದಲ್ಲಿ ಹೊಯ್ಸಳರ ಆಳ್ವಿಕೆಯ ಅನೇಕ ಹೊಸ ಸಂಗತಿಗಳ ಮೇಲೆ ಬೆಳಕನ್ನು ಚೆಲ್ಲಿದ್ದಾರೆ.

(4) **ತೊಂಡನೂರು ರಾಕ್ಷಸಿ ಕರಿಭಂಟ :** ಕರ್ನಾಟಕದ ಇತಿಹಾಸದಲ್ಲಿ 14ನೇ ಶತಮಾನದ ಮಧ್ಯಭಾಗಕ್ಕೆ ಸೇರಿದ್ದ ಒಂದು ಪ್ರಚಲಿತ, ಪ್ರಖ್ಯಾತ ವಂಶ ಅಥವಾ ಕಥೆ ಕರಿಭಂಟನದು. ಇದನ್ನು ಮೈಸೂರಿನ ವೀರನ ಗೇರಿಯಲ್ಲಿದ್ದ ಕೆಂಪಣ್ಣಗೌಡ ಯಕ್ಷಗಾನ. ಕರಿಭಂಟ ಕಥೆ ಎಂಬ ಹೆಸರಿನಿಂದ ಮೊದಲ ಬಾರಿ ಬರೆದು ಪ್ರಕಟಿಸಿದೆ. ಇದರ ಒಂದು ಹಳೆಯ ಹಸ್ತಪ್ರತಿ ಸತ್ತಾರ್ ಅವರಿಗೆ ಅವರ ತಂದೆಯ ಹಳೆಯ ಪುಸ್ತಕಗಳಲ್ಲಿ ದೊರೆಯಿತು. ಆಗ ಅದನ್ನು ಓದಿ ಪ್ರಭಾವಿತರಾಗಿದ್ದ ಇವರು ಮುಂದೆ ಇದರ ಮೇಲೆ ಅಧ್ಯಯನ ನಡೆಸಿದರು. ಹಾಗೂ ತೊಂಡನೂರಿನವರೇ ಆದ ತಮ್ಮ ಅಮ್ಮನನ್ನು (ತಾಯಿಯ ತಾಯಿ) ಈ ಬಗ್ಗೆ ಕೇಳಿ ವಿಷಯ ಸಂಗ್ರಹಿಸಿದ್ದರು. ಮುಂದೆ ಇದರ ಬಗ್ಗೆ ಕ್ರಮಬದ್ಧವಾದ ಅಧ್ಯಯನ ನಡೆಸಿದರು. ಇದರ ಬಗ್ಗೆ ಗ್ರಾಮಸ್ಥರು ಹೇಳುತ್ತಿದ್ದ ಕತೆಯನ್ನು ಅಕಾಲದಲ್ಲಿ ಮುದಾರಾಸಿನಲ್ಲಿದ್ದ ಆಂಗ್ಲರ ಒಬ್ಬ ಸರ್ವೆ ಅಧಿಕಾರಿ ಮೆಕೆಂಜಿ ತಾನು ಕರ್ನಾಟಕದ ಬೇರೆ - ಬೇರೆ ಪ್ರದೇಶಗಳಲ್ಲಿ ಸಂಚಾರ ಮಾಡಿ ಶೇಖರಿಸಿದ್ದ ಚಾರಿತ್ರಿಕ ಬರವಣಿಗೆಗಳನ್ನು (ಕಡತಗಳು, ಕೈಪಿಯತ್ತುಗಳು, ಜೀವನ ಚಿತ್ರಗಳು, ನಾಮಗಳು,) ಮುಂತಾದವನ್ನು ಸಂಪಾದಿಸಿ 'ಮೆಕೆಂಜಿ ಕೈಪಿಯತ್ತುಗಳು ' ಎಂಬ ಹೆಸರಿನಿಂದ ಪ್ರಕಟಣೆ ಮಾಡಿಸಿ ಮದಾರಾಸಿನಲ್ಲಿ ಇಟ್ಟಿದ್ದಾನೆ. ಇವುಗಳಲ್ಲಿ ತೋಣ್ಣೂರು ರಾಕ್ಷಸಿಯ ಕೈಪಿಯತ್ತು ಒಂದು. ಇದನ್ನು ಕೂಡ ಇವರು ಅಧ್ಯಯನ ಮಾಡಿದ್ದಾರೆ. ಹಾಗೂ ಇಲ್ಲಿರುವ ಬಹುಪಾಲು ಸಂಗತಿಗಳು ಕೆಂಪಣ್ಣಗೌಡನ ನಾಟಕದಲ್ಲಿ ಬರೆಯಲ್ಪಟ್ಟ ಸಂಗತಿಗಳೇ ಆಗಿವೆ. ಇದನ್ನೆಲ್ಲ ತಿಳಿದ ಮೇಲೆ 'ರಾಜವಳಕತೆ' ಎಂಬ ಹೆಸರಿನಿಂದ ದೇವಚಂದ್ರ ಪ್ರಕಟಿಸಿದ ಒಂದು ಐತಿಹಾಸಿಕ ಗ್ರಂಥವನ್ನು ಅಧ್ಯಯನ ಮಾಡಿದ್ದಾರೆ. ಈ ನಡುವೆ

ಒಂದು ಹೊಸ ಅಂಶ. ಇವರ ಗಮನಕ್ಕೆ ಬಂದಿತ್ತು. ಈ ಕರಿಭಂಟ ತಮಿಳುನಾಡಿನ ಒಬ್ಬ ಶಬರನಾಯಕನ ಮಗ ಎಂದು ದೇವಚಂದ್ರ ಹೇಳಿದ ಸಂಗತಿ ಇವರಿಗೆ ನೆನಪಿನಲ್ಲಿತ್ತು. ಅನಂತರ ಕುಖ್ಯಾತ. ದಂತ ಕಳ್ಳನಾದ ವೀರಪ್ಪನ ಹುಡುಕಾಟದ ಸಮಯ. ಕನ್ನಡದ ಒಂದು ಪತ್ರಿಕೆಯಲ್ಲಿ ವೀರಪ್ಪನ ಬಗ್ಗೆ ಲೇಖನಗಳು ಬರುತ್ತಿದ್ದವು. ಆಲೇಖನಗಳಲ್ಲಿ ಒಮ್ಮೆ ಒಂದು ಸಂಗತಿ ಪ್ರಕಟವಾಗಿತ್ತು. ನವರಾತ್ರಿಯ ಸಂದರ್ಭದಲ್ಲಿ ವೀರಪ್ಪ ತಮಿಳುನಾಡಿನ ಕೋಯಮತ್ತೂರು ಜಿಲ್ಲೆಯ ಧಾರಾಪುರದ ಒಂದು ಕಾಡಿನಲ್ಲಿ ಇದ್ದು, ತನ್ನ ಮನೆದೇವರು. ಕರಿಭಂಟನ ಪೂಜೆಗಾಗಿ ಹೋಗುತ್ತಿದ್ದ ಒಂದು ಸಂಗತಿ ಈ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಅದನ್ನು ಓದಿದ ಸತ್ತಾರ್ ಅವರಿಗೆ ಕರಿಭಂಟನ ತೊಣ್ಣೂರು ಹಿನ್ನಲೆ ಜ್ಞಾಪಕಕ್ಕೆ ಬಂದಿತು. ಈ ವೀರಪ್ಪನನ್ನು ಭೇಟಿ ಮಾಡಲು ಆಗಿನ ತಮಿಳುನಾಡಿನ ಮುಖ್ಯಮಂತ್ರಿಯಾಗಿದ್ದ ಕರುಣಾನಿಧಿ ನೆಡುಮಾರನ್ ಎಂಬ ಧೂತನನ್ನು ಕಳುಹಿಸಿದ್ದರು. ಈ ಸಂಗತಿಗಳನ್ನು ಸತ್ತಾರ್ ಅವರು ಟಿಪ್ಪಣಿ ಮಾಡಿಕೊಂಡರು. ತಮಿಳುನಾಡಿನಲ್ಲಿ ಈ ಮಾರನ್ ಕುಟುಂಬ ಒಂದು ಶ್ರೀಮಂತರು ಪ್ರಭಾವ ಶಾಲಿಗಳೂ ಆದ ಕುಟುಂಬ. ಇವೆರೆಲ್ಲ ಮುಖ್ಯಮಂತ್ರಿಯ ಸಂಬಂಧಿಗಳು. ಹಾಗೂ ತಮಿಳುನಾಡಿನ ಗೌಂಡರು ಎಂಬ ಸಮುದಾಯಕ್ಕೆ ಸೇರಿದವರು. ಒಕ್ಕಲಿಗರಲ್ಲಿ ಯಾರಾದರೂ ಹುತಾತ್ಮರಾದರೇ ಅಥವಾ ಮಾಸತಿಯಾದರೆ ಅವರನ್ನು ಮನೆದೇವರಾಗಿ ಮಾಡಿಕೊಂಡು ಪೂಜೆ ಮಾಡುವ ಪದ್ಧತಿ ಇದೆ. ಈ ಕಾರಣದಿಂದ ತಮಿಳುನಾಡಿನ ಈ ಮಾರನ್ ಕುಟುಂಬ ಕರಿಭಂಟನ ವಂಶಕ್ಕೆ ಸೇರಿದವರು ಇರಬೇಕೆಂದು ಸತ್ತಾರ್ ಅವರ ಊಹೆ. ಇದರ ದಾಖಲೆಗಳು ಪ್ರಾಯ ಸಹ ಹದಿನಾಲ್ಕನೇ ಶತಮಾನದಲ್ಲಿ ಕೊಯಮತ್ತೂರು ಜಿಲ್ಲೆಯ ಧಾರಾಪುರದಲ್ಲಿ ಆಳುತ್ತಿದ್ದ ನಾಯಕ ಜನಾಂಗದ ಚರಿತ್ರೆಯಲ್ಲಿ ಕಂಡು ಬರಬಹುದು ಎಂದು ಸತ್ತಾರ್ ಅವರ ಊಹೆ. ಈ ಬಗ್ಗೆ ಸಂಶೋಧನೆಯನ್ನು ನಡೆಸಲು ಅವರು ದೈಹಿಕವಾಗಿ ದುರ್ಬಲರಾದ್ದರಿಂದ ಇದರ ಮೂಲಕ ಕರಿಭಂಟ ಹದಿನಾಲ್ಕನೇ ಶತಮಾನದಲ್ಲಿ ಇದ್ದ ಒಬ್ಬ ಐತಿಹಾಸಿಕ ವ್ಯಕ್ತಿ ಎಂಬುದನ್ನು ಇವರು ಒಪ್ಪಿಕೊಂಡು ಅದೇ ಕಾಲದಲ್ಲಿ ತೊಂಡನೂರಿನಲ್ಲಿ ಮತ್ತು ಅದರ ಹತ್ತಿರದಲ್ಲೆ ಆಳುತ್ತಾ ಇದ್ದ ಕಾಲದಲ್ಲಿ ಈ ಕಥೆ ನಡೆದಿದೆ. ಎಂಬುದನ್ನು ಇವರು ಹೇಳುತ್ತಾರೆ.ಇದರ ಬಗ್ಗೆ ಹೆಚ್ಚಿನ ಸಂಶೋಧನೆಗಳು ಮತ್ತು ಅಧ್ಯಯನಗಳು ಅಗಾಬೇಕಾಗಿದೆ.

5) **ಮಣಲ ಮತ್ತು ಅದರ ಪ್ರಾಮುಖ್ಯತೆ :** –ಕರ್ನಾಟಕದ ಇತಿಹಾಸದಲ್ಲಿ ಮಣಲೆರರು [ಸಗರ ಮಣಲೇರರು ಎಂಬ ವಂಶ ಸುಮಾರು 800 ವರ್ಷಗಳ ತನಕ ಕಾಣಿಸಿಕೊಳ್ಳುತ್ತವೆ. ಇವರು ಸಾಮಂತರಾಗಿ, ಕಾರ್ಯಕರ್ತರಾಗಿ ಆಕಾಲದ ದೊಡ್ಡ ರಾಜ ವಂಶಗಳ ನಿಕಟವರ್ತಿಗಳಾಗಿ ಕಾರ್ಯ ನಿರ್ವಹಿಸಿದ್ದರು. ಇವರ ಮೊದಲನೆಯ ಶಾಸನ ನಾಗಮಂಗಲ ತಾಲ್ಲೋಕು ದೇವರಹಳ್ಳಿಯಲ್ಲಿ ಕಂಡು ಬರುತ್ತದೆ. ಇವರು ಮಂಡ್ಯ. ದಕ್ಷಿಣ. ಕರ್ನಾಟಕ. ಆನಂತರ

ಉತ್ತರಕರ್ನಾಟಕಗಳ ಕೆಲವು ಭಾಗಗಳಲ್ಲಿ ಕಾಣಿಸಿಕೊಂಡಿದ್ದಾರೆ. ಇವರು ತಮ್ಮನ್ನು ಮಣಲಿಯರು. ಮಗೆಲೆರರು, ಸಗರ ಮಣಲಿಕರು ಎಂದು ಕರೆದು ಕೊಳ್ಳುತ್ತಾರೆ. ಇವರ ಶಾಸನಗಳೆಲ್ಲೆಲ್ಲ. ತಮ್ಮನ್ನು ಮಣಲಿಕರು ಮತ್ತು ಕುಣಿಂಗಲ ಮಣಲೆರರು ಎಂದು ಕರೆದು ಕೊಂಡಿದ್ದಾರೆ. ಇವರ ಮೂಲದ ಬಗ್ಗೆ ವಿದ್ವಾಂಸರಿಗೆ ಖಚಿತವಾದ ಆಧಾರಗಳು ದೊರೆತಿರಲಿಲ್ಲ. ಸತ್ತಾರ್ ಅವರು ಅವರ ಆಪ್ತರಾಗಿದ್ದ ದಿವಂಗತ ಹವಳಯ್ಯ ನವರು ಮತ್ತು ನಾಗರಾಜರಾಯರು ಇವರೆಲ್ಲ ಸೇರಿ ಪಾಂಡವಪುರ ತಾಲ್ಲೋಕಿನ, ಶಾಸನಗಳ ಅಧ್ಯಯನಗಳಲ್ಲಿ ಹಿರೀಮರಳಿಯಲ್ಲಿ ನಡೆಸಿದ ಅಧ್ಯಯನ ಬಹಳ ಮುಖ್ಯವಾದದ್ದು. ಇಲ್ಲಿ ಇವರಿಗೆ ಮೂರು ಶಾಸನಗಳು ದೊರತವು. ಆ ಪೈಕಿ ಎಲ್ಲವೂ ಕೂಡ ಪ್ರಮುಖವಾದ ಶಾಸನಗಳೇ ಎರಡು ದಾನ ಶಾಸನಗಳು. ಒಂದು ನಿಶದಿಶಾಸನ, ಒಂದು ದಾನಶಾಸನದಲ್ಲಿ ಅದರ ಕತೃ ತನ್ನನ್ನು 'ಮಣಲೆವಾಸಿ' ಎಂದು ಕರೆದುಕೊಂಡು ಬಹಳ ದೊಡ್ಡ ಅಂಶಕ್ಕೆ ಬೆಳಕು ಚೆಲ್ಲಿದ್ದಾನೆ. ಇದರ ಮೂಲಕ ಮಾಲಿಗೆ ಎಂಬುದು ಹಿರೀಮರಳಿಯ ಪ್ರಾಚೀನ ಹೆಸರು ಎಂಬುದು ಮೊದಲ ಹೆಸರು ಚೋಳರ ಉಪಟಳದಿಂದ ತಮ್ಮ ಪ್ರದೇಶವನ್ನು (ಮಾಣಲಿ) ತ್ಯಜಿಸಿ ಪಕ್ಕದಲ್ಲಿ ಇದ್ದ ಕುಣಿಗಲಿಗೆ ಹೋದರು ಇವರ ಶಾಸನಗಳಲ್ಲಿ ಕುಣಿಂಗಲ, ಮಣಲೇರ, ಎಂದು ಕರೆದು ಕೊಂಡಿರುವುದರಿಂದ ಧೃಡಪಡುತ್ತದೆ. ಈ ಪದ ಪ್ರಾರಂಭದಲ್ಲಿ ಮಾಣಲೆಯವರು. ಎಂಬುದಾಗಿ ಇದ್ದು ಯಕಾರಲಪ್ತವಾಗಿ ಮಾಣಲೇರರು ಆಗಿದೆ. ಈ ರೀತಿ ಅಕ್ಷರಗಳು ಬಿಟ್ಟು ಹೋಗುವುದು ಹೊಯ್ಸಳ ಶಾಸನಗಳಲ್ಲಿ ಸಾಮಾನ್ಯ ಸಂಗತಿಯಾಗಿದೆ. ಇದನ್ನು ಸತ್ತಾರ್ ಅವರು ತಾವು ಅಧ್ಯಯನ ಮಾಡಿದ ಹೊಯ್ಸಳರ ಬೇರೆ-ಬೇರೆ ಶಾಸನಗಳಿಂದ ಧೃಡಪಡಿಸಿದ್ದಾರೆ. ಒಟ್ಟಾರೆ ಒಂದು ತೊಡಕಾಗಿದ್ದ ಚಾರಿತ್ರಿಕ ಸಂಗತಿ ಈ ಅಧ್ಯಯನದ ಮೂಲಕ ಬೆಳಕಿಗೆ ಬಂತು ಹೀಗಾಗಿ ಈಗಿನ ಹಿರೀಮರಳಿಯೇ ಪ್ರಾಚೀನ ಮಣಲಿ ಎಂಬ ಹೆಸರಿನಿಂದ ಹೊಯ್ಸಳರ ಆಡಳಿತ ಕೇಂದ್ರವಾಗಿತ್ತು. ಆ ಕಾಲದಲ್ಲಿ ಇಲ್ಲಿ ಅವರ ಕಾರ್ಯಕರ್ತ ಕಾಮಯ್ಯನಾಯಕ ಆಳ್ವಿಕೆ ನಡೆಸುತ್ತಿದ್ದನು. ಎಂಬ ಸಂಗತಿಯನ್ನು ಸತ್ತಾರ್ ಅವರು ತಮ್ಮ ಶಾಸನಗಳ ಅಧ್ಯಯನದ ಆಧಾರದಿಂದ ತೆಗೆದು ತೋರಿಸಿದ್ದಾರೆ.

**(2) ಸಾಹಿತ್ಯ ಸಂಬಂಧಿ ಲೇಖನಗಳು :-** (1) ಇವರು ಸಾಹಿತ್ಯ ಸಂಬಂಧ ಲೇಖನಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಮುಖ್ಯವಾದವು ಎಂದರೆ ಇಂಗ್ಲೀಷ್ ಭಾಷೆಯ ಇಪ್ಪತ್ತನೇ ಶತಮಾನದ ಒಬ್ಬ ಪ್ರಮುಖ ಸಾಹಿತಿ ಡಿ. ಹೆಚ್.ಲಾರೆನ್ಸ್‌ನನ್ನು ಕುರಿತು ಇವರು ಬರೆದ ಲೇಖನ. ಇದು ಮಾಸ್ತಿಯವರ ಜೀವನ ಪತ್ರಿಕೆಯಲ್ಲಿ 1960ರ ಜನವರಿ ಸಂಚಿಕೆಯಲ್ಲಿ ಪ್ರಕಟವಾಯಿತು. ಇದರಲ್ಲಿ ಇವರು ಉಲ್ಲೇಖಿಸಿದ್ದ ಇಂಗ್ಲೀಷ್ ಭಾಷೆಯಲ್ಲಿ ಬರೆಯಲ್ಪಟ್ಟಿದ್ದ ಲೇಖನಗಳನ್ನು ಬಿಟ್ಟು ಅವುಗಳನ್ನು ಕನ್ನಡದಲ್ಲಿ ಸೂಚಿಸುತ್ತೇನೆ. ಎಂದು ಮಾಸ್ತಿಯವರು ಇವರಿಗೆ ತಿಳಿಸಿದ್ದರು. ಅದೇ ಪ್ರಕಾರ ಈ ಲೇಖನವನ್ನು ಅವರು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದರು. ಆಕಾಲದಲ್ಲಿ ಇಡಿ ದೇಶದಲ್ಲಿ ಇವನ ಬಗ್ಗೆ

ಯಾವುದೇ ಭಾಷೆಯಲ್ಲೂ ಈ ಲೇಖನ ಪ್ರಕಟವಾಗಿರಲಿಲ್ಲ. ಹೀಗಾಗಿ ಇದೇ ಮೊದಲ ಅಧ್ಯಯನವಾಗಿತ್ತು. ಲಾರೆನ್ಸ್ ಒಬ್ಬ ಭಾವುಕನಾದ ಬರಹಗಾರ. ಆತನ ಉಮನ್ ಇನ್‌ಲವ್ (woman in love ) ' ಪ್ಲುಮುಡ್ ಸರ್‌ಪೆಂಟ್' ಮತ್ತು 'ಲೇಡಿ ಚಾರ್ಟಲೀಸ್ ಲವರ್' ಎಂಬವು ಪ್ರಖ್ಯಾತವಾದ ಕಾದಂಬರಿಗಳು. ಈ ಪೈಕಿ ಕೊನೆಯ ಕಾದಂಬರಿಯನ್ನು ನಮ್ಮವರೇ ಆದ ಭಾರತೀಸುತ ಕನ್ನಡದಲ್ಲಿ 'ಎಡಕಲ್ಲು ಗುಡ್ಡದ ಮೇಲೆ' ಎಂಬ ಹೆಸರಿನಿಂದ ಬರೆದಿದ್ದಾರೆ. ಇವನ ಕೆಲವು ಕಥೆಗಳೂ ಮತ್ತು ಕವನಗಳು ಸಾಂಕೇತಿಕವಾಗಿವೆ. ಕೆಲವು ಒಳ್ಳೆಯ ಕಥೆಗಳನ್ನು ಬರೆದಿದ್ದಾನೆ.

(2) ಇವರು ಅಮೇರಿಕಾದ 20ನೇ ಶತಮಾನದ  ಪ್ರಸಿದ್ಧ ಜನಪ್ರಿಯ ಕವಿ ರಾಬರ್ಟ್ ಫ್ರಾಸ್ಟ್ ಬಗ್ಗೆ  ಕೂಡ ಒಂದು ಲೇಖನ ಬರೆದು ಅದನ್ನು 'ಗೋಕುಲ' ಎಂಬ ಮಾಸ ಪತ್ರಿಕೆಯಲ್ಲಿ ಪ್ರಕಟಿಸಿರುತ್ತಾರೆ. ರಾಬರ್ಟ್ ಫ್ರಾಸ್ಟ್ 20ನೇ ಶತಮಾನದ ಒಬ್ಬ ಪ್ರಸಿದ್ಧ ಅಮೇರಿಕನ್ ಕವಿ, ಈತ ತೀರ ಭಾವುಕನು ತೀರ ವಾಸ್ತವವಾದಿಯು ಆದ ಕವಿ. ಸುಮಾರು ನೂರಕ್ಕೂ ಮೇಲ್ಪಟ್ಟು ಕವನಗಳನ್ನು ರಚಿಸಿದ್ದಾನೆ. ಇವನಿಗೆ ಅಮೇರಿಕಾ ದೇಶದಲ್ಲಿ ಬಹುಮಟ್ಟಿನ ಪ್ರಶಸ್ತಿಗಳು. ಬಹುಮಾನಗಳು ಬಂದಿದ್ದು ಇವನ ಭಾಷೆ ತೀರ ಸ್ಪಷ್ಟವು ನೇರವು ಆಧುನಿಕವಾಗಿದೆ. ಆಧುನಿಕ ಅಮೇರಿಕನ್ ಕವಿಗಳಿಗೆ ನಾಯಕನಾಗಿ ತನ್ನದೇ ಆದ ಹೊಸ ಸಿದ್ಧಾಂತವನ್ನು ಈತ ನಿರೂಪಿಸುತ್ತಾನೆ. ಅದರಲ್ಲಿ "ಪ್ರತಿಯೊಂದು ಹುಟ್ಟು ಕೂಡ ತನ್ನ ಮೂಲಕ ಕಡೆಗೆ ಧಾವಿಸುತ್ತದೆ" ಎಂಬ ತತ್ವವನ್ನು ಪ್ರತಿಪಾದಿಸುತ್ತಾನೆ. ಅದನ್ನು ಸಮರ್ಥಿಸುವ ಅನೇಕ ಕವನಗಳು ಇವನಿಂದ ರಚಿಸಲ್ಪಟ್ಟಿವೆ.  ಇದರಲೆಲ್ಲ ತೀರ ಪ್ರಮುಖವೂ ಪ್ರಸಿದ್ಧವೂ ಆದ ಕವನ ಎಂದರೆ 'ದಿವೆಸ್ಟ್ ರನ್ನಿಂಗ್ ಬ್ರೂಕ್' ಎಂಬ ಕವನ ಇದರ ದೋರಣೆ ಬೈಬಲ್‌ನ ಒಂದು ಪ್ರಸಂಗ ಹಾಗೂ ನಮ್ಮವರೇ ಆದ ಶಿವರಾಮ ಕಾರಂತರು ಬರೆದ ಮರಳಿ ಮಣ್ಣಿಗೆ ಮತ್ತು ಇಂಗ್ಲೆಂಡಿನ ಪ್ರಖ್ಯಾತ ಕಾದಂಬರಿಕಾರ ಥಾಮಸ್ ಹಾರ್ಡಿಯ ರಿಟರ್ನ್ ಆಫ್‌ದಿನೆಟ್ಯು ಎಂಬ ಕಾದಂಬರಿಗಳ ಧೋರಣೆಯನ್ನು ಹೋಲುತ್ತದೆ. ಈ ಬಗ್ಗೆ ಇವರು ಬರೆದ ಕನ್ನಡದ ಲೇಖನ ಮೊದಲನೆಯದು.

3) ಇವರು ಸಿಂಹಳ. ಲಂಕೆಯಲ್ಲವೇ ಎಂಬ ಹೆಸರಿನಿಂದ ಬರೆದ ಲೇಖನ. ರಾಮಾಯಣದ ಕಥೆಯನ್ನು ಕೇಂದ್ರವಾಗಿ ಇಟ್ಟುಕೊಂಡಿದೆ. ಈ ಬಗ್ಗೆ ಸಂಶೋಧನೆ ನಡೆಸಿ. ಇಂಗ್ಲೀಷ್ ಭಾಷೆಯಲ್ಲಿ ಪ್ರಸಿದ್ಧ ನಾಟಕಕಾರರಾಗಿದ್ದ ಶ್ರೀ ಟಿ.ಪಿ.ಕೈಲಾಸಂ ರವರ ತಂದೆ ಟಿ.ಪರಮಶಿವ ಅಯ್ಯರ್‌ರವರು ಇಂಗ್ಲೀಷ್‌ನಲ್ಲಿ ಬರೆದ 'ರಾಮಾಯಣ ಮತ್ತು ಲಂಕಾ' ಎಂಬ ಪುಸ್ತಕದ ಸಾರಾಂಶವಾಗಿದೆ. ಇದರ ಪ್ರಕಾರ ಲಂಕೆಯು ಸಿಂಹಳದಲ್ಲಿ ಇರಲಿಲ್ಲ. ಅದು ಮಧ್ಯಪ್ರದೇಶದ ವಿಂಧ್ಯ ಮತ್ತು ಸಾತ್ಪುರ ಗುಡ್ಡಗಾಡುಗಳ ಪ್ರದೇಶದಲ್ಲಿ ಇದ್ದೀತು ಎಂದು ಅವರು ಆಧಾರ ಸಮೇತರಾಗಿ ಬರೆದಿದ್ದಾರೆ. ಇದನ್ನು ಸತ್ತಾರ್ ಅವರು ಆಧರಿಸಿ ಈ ಲೇಖನ ಪ್ರಕಟಿಸಿದ್ದಾರೆ. ಇದು

ಜನ ಪ್ರಗತಿ ಪತ್ರಿಕೆಯಲ್ಲಿ ಪ್ರಕಟವಾಯಿತು.

4) ಇವರು ಲಕ್ಷೀಶನ ಜೈಮಿನೀ ಭಾರತವನ್ನು ಬಹಳ ಆಸಕ್ತಿಯಿಂದ ಓದುತ್ತಿದ್ದರು. ಅಲ್ಲಿಯ ಅನೇಕ ಪ್ರಸಂಗಗಳು ಇವರಿಗೆ ಬಹಳ ಪ್ರಿಯವಾಗಿದ್ದವು. ಆ ಪೈಕಿ ಸುಧನ್ವನ ಪ್ರಸಂಗ ಇವರನ್ನು ಆಕರ್ಷಿಸಿತು. ಈ ಇಡಿ ಪ್ರಸಂಗವನ್ನು ಎತ್ತಿಕೊಂಡು ಒಂದು ದೊಡ್ಡ ನಾಟಕವನ್ನು 'ಸುಧನ್ವ ಲಂಕಂ' ಎಂಬ ಹೆಸರಿನಿಂದ ಬರೆದರು ಮತ್ತು ಅದನ್ನು ಆಗ ಪಾಂಡವಪುರಕ್ಕೆ ಬಂದಿದ್ದ ಮಾಸ್ತಿಯವರಿಗೆ ತೋರಿಸಿದರು ಮಾಸ್ತಿಯವರು ಇದು ಬಹಳ ದೊಡ್ಡದಾಯಿತು. ಈಗ ಇದನ್ನು ಯಾರು ಹಾಡುವುದಿಲ್ಲ. ಈ ಹೆಸರಿನ ಯಕ್ಷಗಾನವು ಇದೆ. ಇದನ್ನು ಒಂದು ಲೇಖನವಾಗಿ ಪರಿವರ್ತಿಸು ಎಂದು ಹೇಳಿದರು ಅದೇ ಪ್ರಕಾರ ಈ ನಾಟಕವನ್ನು 'ಕೃಷ್ಣ ಕೊಂದ ಸುಧನ್ವ' ಎಂಬ ಹೆಸರಿನಿಂದ ಬರೆದು ಅದನ್ನು ಮಂಡ್ಯದಿಂದ ಶಂಕರೇಗೌಡರು ಪ್ರಕಟಿಸುತ್ತಿದ್ದ ಜನಮನ ಎಂಬ ವಾರಪತ್ರಿಕೆಯಲ್ಲಿ ಪ್ರಕಟಿಸಿದರು.

5) ತ.ರಾ.ಸು.ಇವರ ಅತ್ಯಂತ ಆಪ್ತರು. ಅವರ ಎಲ್ಲಾ ಎಂದರೆ ಸಾಹಿತ್ಯಕ ಚಟುವಟಿಕೆಗಳಲ್ಲಿ ಇವರೊಂದಿಗೆ ಚರ್ಚಿಸುತ್ತಿದ್ದರು. ವಾರದಲ್ಲಿ ಎರಡು – ಮೂರು ಭಾರಿ ಅವರನ್ನು ಭೇಟಿಯಾಗುತ್ತಿದ್ದರು. ತ.ರಾ.ಸು.ರವರು 'ಕಾಮಾಕ್ಷಿ' ಎಂಬ ಹೆಸರಿನ ನೀಳ್ಗತೆ ಬರೆದಿದ್ದಾರೆ. ಅದನ್ನು ಇವರು ವಿಮರ್ಶೆ ಮಾಡಿ ಅದು ಒಂದು ಸಂಕಲನದಲ್ಲಿ ಮುದ್ರಣವಾಗಿದೆ. ತ.ರಾ.ಸು.ರವರಿಗೆ ಸಾಹಿತ್ಯದ ಜೊತೆಗೆ ಬೇರೆ– ಬೇರೆ ವಿಷಯಗಳಲ್ಲಿ ಆಸಕ್ತಿ ಇದ್ದೀತು. ಆ ಬಗ್ಗೆ ಇವರೊಡನೆ ಗಹನವಾಗಿ ಚರ್ಚಿಸುತ್ತ ಇದ್ದರು. ತ.ರಾ.ಸು. ಕಾಲವಾದ ಮೇಲೆ ಇವರು ಅವರನ್ನು ಕುರಿತು ನಾಕಂಡ ತ.ರಾ.ಸು. ಎಂಬ ಶೀರ್ಷಿಕೆಯಲ್ಲಿ ಅವರನ್ನು ಕುರಿತು ಲೇಖನ ಬರೆದಿದ್ದಾನೆ. ಇದು ಮಯೂರ ಮಾಸ ಪತ್ರಿಕೆಯಲ್ಲಿ ಪ್ರಕಟವಾಗಿದೆ. ತ.ರಾ.ಸು. ಬದುಕಿದ್ದಾಗ ಶೃಂಗೇರಿ ಮಠದ ಪೀಠಾಧ್ಯಕ್ಷರ ಸೂಚನೆಯ ಪ್ರಕಾರ ತ.ರಾ.ಸು. ಇವನ ಎಲ್ಲಾ ಚಟುವಟಿಕೆಗಳನ್ನು ಕುರಿತಂತೆ ಒಂದು ಗ್ರಂಥವನ್ನು ರಚಿಸಬೇಕೆಂದು ಯೋಜನೆ ಹಾಕಿಕೊಂಡರು. ಅ ಸಂಕಲನಕ್ಕಾಗಿ ಸತ್ತಾರ್‌ರವರು ಆ ಸಂಕಲನಕ್ಕಾಗಿ ಯಜ್ಞದರ್ಶನ ಮತ್ತು ನಾಟ್ಯಚಾರ್ಯ. ಶಿವ ಎಂಬ ಹೆಸರಿನಿಂದ ಎರಡು ಲೇಖನ ಬರೆದರು. ಈ ಲೇಖನಗಳು ಶಿವಾರ್ಪಣ ಎಂಬ ಹೆಸರಿನ ಆ ಸಂಕಲನದಲ್ಲಿ ಪ್ರಕಟವಾದವು. ತ.ರಾ.ಸು. ಮತ್ತು .ಅವರ ಸಾಹಿತ್ಯವನ್ನು ಕುರಿತಂತೆ ಒಂದು ಗ್ರಂಥವನ್ನು ತರಬೇಕೆಂದು ಚಿತ್ರದುರ್ಗಾದ ಅವರ ಅಭಿಮಾನಿಗಳು. ಸ್ನೇಹಿತರು. ಪ್ರಯತ್ನಿಸಿದರು. ಅದಕ್ಕಾಗಿ ಲೇಖನಗಳನ್ನು ಬರೆಸಿ ಅವುಗಳನ್ನು ಗಿರಿಮಲ್ಲಿಗೆ ಎಂಬ ಸಂಗ್ರಹದಲ್ಲಿ ಪ್ರಕಟಿಸಿದ್ದಾರೆ. ಈ ಸಂಕಲನಕ್ಕಾಗಿ ಅವರು ಸತ್ತಾರ್‌ರವರಿಂದ ಪ್ರಗತಿಶೀಲ ತ.ರಾ.ಸು. ಮತ್ತು ನಕ್ಷತ್ರ ತ.ರಾ.ಸು ಎಂಬ ಹೆಸರಿನಲ್ಲಿ ಎರಡು ಲೇಖನಗಳನ್ನು ಬರೆಸಿದರು. ಹಾಗೆಯೇ ಚಿತ್ರದುರ್ಗದ ಶ್ರೀ ಲಕ್ಷಿಣ್ ತೇರಗಾವಿಯವರು ಸಂಪಾದಿಸಿದ 'ಹರತಿ ಸಿರಿ' ಎಂಬ ಗ್ರಂಥಕ್ಕೆ ಸತ್ತಾರ್‌ರವರು ತಾವು ಸಂಪಾಧಿಸಿದ ತರೀಕೆರೆಯ ಕೈಪಿಯತ್ತು ಎಂಬ ಲೇಖನವನ್ನು ಕೊಟ್ಟಿದ್ದಾರೆ. ಇವು ಸಂಕಲನಗಳಿಗೆ

ಇವರು ಬರೆದು ಕೊಟ್ಟು ಲೇಖನಗಳಾಗಿವೆ. ಇದಲ್ಲದೇ ಆಂದೋಲನ ಎಂಬ ವಾರ ಪತ್ರಿಕೆಗೆ ಹೊಗೆಯ ಹಿಂದೆ ಎಂಬ ಹೆಸರಿನಿಂದ ದಲಿತರ ಸಮಸ್ಯೆ ಹಾಗೂ ಅದರ ಪರಿಹಾರ ಕುರಿತಂತೆ ಒಂದು ಲೇಖನವನ್ನು ಬರೆದಿದ್ದಾರೆ. ಇವು ಇವರ ಸಾಹಿತ್ಯ. ಇತಿಹಾಸ ಹಾಗೂ ಅದಕ್ಕೆ ಸಂಬಂಧಪಟ್ಟ ವಿಷಯಗಳ ಮೇಲೆ ಬರೆದ ಲೇಖನಗಳಾಗಿವೆ. ಹೀಗೆಯೇ ಇತ್ತೀಚಿಗೆ ಬರೆದ ಅನೇಕ ಲೇಖನಗಳ ಹಸ್ತಪ್ರತಿಗಳ ರೂಪದಲ್ಲಿವೆ.

### 3) ಇತರ ಬರಹಗಳು

1. ಇವರು 20 ಕಥೆ 15 ನಾಟಕ, 18 ಚಿಂತನ ಪ್ರಬಂಧಗಳು ಮತ್ತು ಕೆಲವು ಇತರೆ ಲೇಖನಗಳನ್ನು ಬರೆದಿದ್ದಾರೆ.

1. ಕಥೆಗಳು :- ಇವರು 1954ರಿಂದ ಕಥೆಗಳನ್ನು ಬರೆಯಲು ಪ್ರಾರಂಭಿಸಿದರು. ಇವರ ಮೊದಲ ಕಥೆಗಳು ಜನ ಪ್ರಗತಿ ಪತ್ರಿಕೆಯಲ್ಲಿ ಪ್ರಕಟವಾದವು. [ ಗರುಡೆ ಮುಚ್ಚೆ, ಒಂದೇ ಏಟು, ಕೆಂಪು ರೇಷಿಮೆಯದಾರಗಳು, ಆ ಆಲದ ಮರ, ಸಂಯುಕ್ತ ಕರ್ನಾಟಕದಲ್ಲಿ ಒಬ್ಬ ಸ್ವಾತಂತ್ರ್ಯ ಹೋರಾಟಗಾರನ ಜೀವನ ಕುರಿತಂತೆ, 'ತೇಲಿದರು ಹೆಣವಾಗಿ' ಎಂಬ ಕಥೆಯನ್ನು ಬರೆದರು] ಪ್ರಜಾಮತ ಪತ್ರಿಕೆಯಲ್ಲಿ ಜಾಸ್ಮ ಎಂಬ ಗುಜರಾತಿನ ಇತಿಹಾಸಕ್ಕೆ ಸಂಬಂಧಿಸಿದಂತೆ ಬರೆದ ಕಥೆ ಪ್ರಕಟವಾಯಿತು. ಸೌರಭ ಎಂಬ ವಾರ ಪತ್ರಿಕೆಯಲ್ಲಿ ಕಲ್ಲಾರೆಗೌಡನ ಕೊಪ್ಪರಿಗೆ ಎಂಬ ಕಥೆ ಪ್ರಕಟವಾಯಿತು. ನಿವೇದಿತಾ. ಎಂಬ ವಾರ ಪತ್ರಿಕೆಯಲ್ಲಿ ಎರಡು ಕಥೆಗಳು ಪ್ರಕಟವಾದವು. ನಂತರ ಸುಮಾರು 15.20, ವರ್ಷಗಳ ಕಾಲ ದೀರ್ಘವಾದ ಮೌನವಹಿಸಿ ಮತ್ತೆ 80 ದಶಕದಿಂದ ಸಾಹಿತ್ಯ ರಚನೆಗೆ ಕೈ ಇಟ್ಟು
2. ಈ ಸಲ ಕಾದಂಬರಿಗಳನ್ನು ಬರೆಯಲು ಪ್ರಾರಂಭ ಮಾಡಿದರು. ಇವರು ಬರೆದ ಆ ಅನೇಕ ಕಥೆಗಳು ಅಂದರೆ ಸುಮಾರು 15 ಕಥೆಗಳು ಹಸ್ತ ಪ್ರತಿ ರೂಪದಲ್ಲಿ ಉಳಿದು ಕೊಂಡಿವೆ. ಇವು [ತೀರ್ಪು, ಆಸೆ ಮರುಕಳಿಸಿತು, ಭೇಟಿ, ಆಪತ್ಬಾಂಧವರು ತೆತ್ತನುಚಕ್ರಬಡ್ಡಿ, ನೀಲಕುಂತಳ, ಇಸ್ತಮಾ, ಗುಂಬದೇನಾಜೂಕ್, ಆಕಾಶವಾಣಿ, ಕೂಗಿತ್ತು

ಕನಸಾಗೆ, ಕಪಾಲ ಋಣ-ಮುಕ್ತ, ತಿಂದ್ಲಾಲೆ, ಋಣಮುಕ್ತ, ಹಾವುಗಲ್ಲು, ಈಕೆ ಹೆಣ್ಣಲ್ಲ ಗಂಡು, ಎಂಬ ಸ್ವಾತಂತ್ರ್ಯ ಕಥೆಗಳನ್ನು ತಪ್ಪೊಪ್ಪಿಗೆ, ತಲೆಗಡುಕ, ಮಧ್ಯರಾತ್ರಿಯ ದಾಹ, ಪರಂಪರೆ, ವಿಕಲಾಂಗ, ರಜತ ರಶ್ಮಿ, ಸಿಂಧೂ ಸಂಭ್ರಮ ಮತ್ತು ಮಜ್ಜೆ ಮುಂಡಾಸು. ಎಂಬ ಅನುವಾದಿತ ಕಥೆಗಳನ್ನು ಬರೆದಿದ್ದಾರೆ. ಇವೆಲ್ಲ ಅಪ್ರಕಟಿತವಾದವು.

(ಅ) **ನಾಟಕಗಳು** :-ಇವರು ಸುಮಾರು 15 ನಾಟಕಗಳನ್ನು ಬರೆದಿದ್ದಾರೆ. ಇವು ಕೂಡ ಅಪ್ರಕಟಿತವಾಗಿವೆ. ಇವುಗಳಲ್ಲಿ

1. ಜಾಸ್ಮಾ, 2. ಕಾಮದಹನ , 3. ಶಪ್ತದ್ವಾರವತಿ , 4. ಗಂಗನಚುಕ್ಕಿ 5. ಮೃತ್ಯು ಪೆಂಡೆಯ, 6. ಎಚ್ಚರ ಗಣ್ಣು, 7.ಸಿರಿಯ ಪತನ , 8. ಖಂಡೆರಾಯ, 9. ಸಾವಿಯಬ್ಬೆ, 10. ಶಾಂತಲಾ, 11. ಸರ್ಜಾಹನುಮಪ್ಪ ನಾಯಕ, 12. ಸೀಯರ್ಾಸೂರಹೋಯಿತು, 13. ಅಪೂರ್ವ ಆತ್ಮಾಹುತಿ, 14. ಮೀರ್‌ಸಾದಕ್, 15. ಅವಾಂತರ, ಎಂಬ ಐತಿಹಾಸಿಕ ನಾಟಕಗಳನ್ನು 15. ಅವಾಂತರ , 16. ಕಿತಾಪತಿ, 17.ಬೆಪ್ಪು ತಕ್ಕಡಿ, ಎಂಬ 18. ದೇವನಂದರ ದೀಪಸ್ತಂಭಗಳು ಎಂಬ ಸಾಮಾಜಿಕ ಅನುವಾದ ನಾಟಕಗಳನ್ನು ರಚಿಸಿದ್ದಾರೆ.

3) ಇವುಗಳೇ ಅಲ್ಲದೇ ಇವರು 15 ಚಿಂತನ ಪ್ರಬಂಧಗಳನ್ನು ಬರೆದಿದ್ದಾರೆ.

**ಆ) ನಾಟಕಗಳು**

**1) ಜಾಸ್ಮಾ** :- ಈ ನಾಟಕ ಗುಜರಾತಿನ ಚರಿತ್ರೆಗೆ ಸಂಬಂಧಿಸಿದೆ. ಚಾಲುಕ್ಯ ಸಾಮ್ರಾಟ 2ನೇ ಪುಲಕೇಶಿ ಗುಜರಾತನ್ನು ಗೆದ್ದು ಅಲ್ಲಿ ತನ್ನ ತಮ್ಮ ಕುಬ್ಜ ವಿಷ್ಣುವರ್ಧನನನ್ನು ಅರಸನನ್ನಾಗಿ ಮಾಡಿದನು. ಈತನ ಮರಿಮಗ ಸಿದ್ಧರಾಜ ಸೋಲಂಕಿ. ಈತ ಗುಜರಾತಿನ ಪ್ರಸಿದ್ಧ ರಾಜರಲ್ಲಿ ಒಬ್ಬ. ಈತನು ಪಕ್ಕದ ರಾಜನನ್ನು (ಕೆಂಗೆರ) ಸೋಲಿಸಿದಾಗ ಅದರ ನೆನಪಿನಲ್ಲಿ ತಾನು ಸಿಂಹರಾಜ ಎಂದು ಬಿರುದನ್ನು ಧರಿಸಿದನು ಮತ್ತು ತನ್ನ ಹೆಸರಿನ ಒಂದು ಶಕವನ್ನು ಜಾರಿಗೆ ತಂದನು. ಇದು ಸಿಂಹಶಕೆ ಎಂಬ ಹೆಸರಿನಿಂದ ಪಶ್ಚಿಮ ಭಾರತದಲ್ಲಿ ಬಳಕೆಯಲ್ಲಿದೆ. ಈತನ ತಾಯಿ ಮೀನಳದೇವಿ . ಗೋವಯ್ಯ ಕದಂಬರಾಜ ಜಯಕೇಶಿಯ ಮಗಳು ಮೀನಳದೇವಿ. ಹೀಗೆ ಈತ ತಂದೆ ಮತ್ತು ತಾಯಿ ಎರಡು ಕಡೆಯಿಂದ ಕನ್ನಡಿಗ . ಒಂದು ದಿನ ಇವರು ತನ್ನ ಸ್ನೇಹಿತ ಭೀಮರಾಜನ ಜೊತೆ ರಾತ್ರಿಯ ಬೆಳದಿಂಗಳಲ್ಲಿ ವಿಹಾರಕ್ಕೆ ಹೋಗಿದ್ದಾಗ ಮತ್ತು ಅಲ್ಲಿದ್ದ ಮಹಾದೇವನ ಮಂದಿರದಲ್ಲಿ ಜ್ಞಾನಾಸಕ್ತನಾಗಿ ಕುಳಿತಿದ್ದಾಗ ಈತನಿಗೆ ಮಹಾದೇವ ಮುಂದಿನ ಬಯಲಿನಲ್ಲಿ ಒಂದು ಕೆರೆಯನ್ನು ನಿರ್ಮಿಸಿ ಅದರಲ್ಲಿ ಸಹಸ್ರ ಲಿಂಗಗಳನ್ನು ಸ್ಥಾಪಿಸಬೇಕೆಂದು ಹೇಳಿದಂತೆ ಭಾಸಾವಾಯಿತು. ಈತ ಮುಂದೆ ವಿಹಾರ ಮಾಡುವಾಗ ಒಂದು ಸರ್ಪ ಸ್ವಲ್ಪ ದೂರ ಮಾರ್ಗದರ್ಶನ ಮಾಡಿಸಿ ಮರೆಯಾಯಿತು. ಅದೇ ಮಿಯುಕ್ತ ಸ್ಥಳವೆಂದು ರಾಜ ಆ ಸ್ಥಳವನ್ನು ಆರಿಸಿ ಅಲ್ಲಿ ಕೆರೆಯನ್ನು ಕಟ್ಟಿಸುವ ಮತ್ತು ಅದರ ತಟದಲ್ಲಿ ಸಹಸ್ರ ಲಿಂಗಗಳನ್ನು ಸ್ಥಾಪಿಸುವ ಕಾರ್ಯವನ್ನು ಕೈಗೊಂಡನು. ಅದಕ್ಕಾಗಿ ಪಕ್ಕದ ನಾಡುಗಳಿಂದ ಕೆಲಸಗಾರರನ್ನು, ಶಿಲ್ಪಿಗಳನ್ನು ಕರೆಸಿಕೊಂಡನು. ಕೆಲಸ ನಡೆಯುತ್ತಿತ್ತು. ಕೆಲವು ತಿಂಗಳ ನಂತರ ಕೆಲಸವನ್ನು ಪ್ರಾರಂಭಿಸಲು ಸಿದ್ಧರಾಜ ತನ್ನ ಸ್ನೇಹಿತ ಭೀಮರಾಜನೊಂದಿಗೆ ಸ್ಥಳಕ್ಕೆ ಆಗಮಿಸಿ ಪರಿಶೀಲನೆ ಮಾಡುತ್ತ ಹೋಗುತ್ತಿರುವಾಗ ಕಲ್ಲು ಮಣ್ಣುಗಳನ್ನು ಕುಕ್ಕೆಯಲ್ಲಿ ಹೊತ್ತು ತರುತ್ತಿದ್ದ ಒಡನ ಸಮುದಾಯದ ಒಬ್ಬ ಕನ್ಯೆಯನ್ನು ಕಂಡನು. ಆಕೆ ಅಪರೂಪದ ಸುಂದರಿ. ಅವಳ ಸೌಂದರ್ಯಕ್ಕೆ ಸಿದ್ಧರಾಜ

ಮಾರುಹೋಗಿ ಅವಳನ್ನು ತನ್ನ ರಾಣಿಯನ್ನಾಗಿ ಮಾಡಿಕೊಳ್ಳಲುನಿರ್ಧರಿಸಿದನು. ಈ ವಿಷಯವನ್ನು ತನ್ನ ಸ್ನೇಹಿತ ಭೀಮರಾಜನಿಗೂ ತಿಳಿಸಿದನು ಹಾಗೂ ಇದಕ್ಕಾಗಿ ಪ್ರಯತ್ನಿಸುವಂತೆ ಆತನಿಗೆ ಹೇಳಿದನು. ಆ ಜನ ಗಾಬರಿಯಾಗಿಒಪ್ಪದೇ ಇದ್ದಾಗ ಸ್ವಯಂ ತಾನೇ ಆಕೆಯ ಮುಂದೆ ತನ್ನ ಇಚ್ಛೆಯನ್ನು ವ್ಯಕ್ತಪಡಿಸಲು ಆಕೆಯನ್ನು, ಆಕೆಯ ತಂದೆಯನ್ನು ದೇವಸ್ಥಾನದ ಬಳಿ ಕರೆಸಿಕೊಂಡು ಆಕೆಗೆ ವಿಷಯ ತಿಳಿಸಿ ತಾನು ವಿಧಿಪೂರ್ವಕವಾಗಿ ಸಾರ್ವಜನಿಕವಾಗಿ ಆಕೆಯನ್ನು ವಿವಾಹವಾಗಿ ತನ್ನ ರಾಣಿಯಾಗಿ ಮಾಡಿಕೊಳ್ಳುತ್ತೇನೆ ಎಂದು ಹೇಳಿದನು. ಆಕೆ ಅತ್ಯಂತ ವಿನಯದಿಂದ ಹಾಗೂ ವಿಧೇಯತೆಯಿಂದ ಇದನ್ನು ನಿರಾಕರಿಸಿದಳು. ಕೊನೆಗೆ ಹತಾಶನಾದ ರಾಜ ಈ ವಿಷಯದಲ್ಲಿ ಏನಾದರೂ ಮಾಡು ಎಂದು ತನ್ನ ಸ್ನೇಹಿತ ಭೀಮರಾಜನಿಗೆ ಹೇಳಿದನು. ಭೀಮರಾಜ ತನ್ನ ಒಬ್ಬ ಸಹಾಯಕ ದಳಪತಿಗೆ ಈ ಜವಾಬ್ದಾರಿ ಕೊಟ್ಟನು. ದಳಪತಿಯ ಅಚಾತುರ್ಯದಿಂದ ಸೈನಿಕರು ಈ ಕೆಲಸಗಾರರ ಗುಡಿಸಲುಗಳಿಗೆ ಬೆಂಕಿ ಹಚ್ಚಿದರು. ತನ್ನಿಂದ ತನ್ನ ಅಮಾಯಕ ಜನ ಸಾಯಬೇಕಾದ ಪರಿಸ್ಥಿತಿ ಉಂಟಾದುದನ್ನು ನೋಡಿ ದುಃಖಿತಳಾದ 'ಜಾಸ್ಮಾ' ಆ ಬೆಂಕಿಗೆ ಹಾರಿ ಆತ್ಮಹತ್ಯೆ ಮಾಡಿಕೊಂಡಳು. ಇದರಿಂದ ಅವಳ ಸಮುದಾಯದ ಜನ ಆಕೆಯನ್ನು ಒಬ್ಬಳು 'ಮಹಾಸತಿ' ಎಂದು ಗೌರವಿಸಿ ಆಕೆಯನ್ನು ದೇವತೆಯಾಗಿ ಪೂಜಿಸಲು ಪ್ರಾರಂಭಿಸಿದರು. ಹೀಗೆ ದುರಂತಮಯವಾಗಿ ಕೊನೆಗೊಂಡ ಈ ಪುರಾಣವನ್ನು ಸತ್ತಾರರವರು 'ಜಾಸ್ಮಾ' ಎಂಬ ಹೆಸರಿನಿಂದ ಬರೆದರು. ಇದು ಮೈಸೂರು, ಬೆಂಗಳೂರು, ಆಕಾಶವಾಣಿಗಳಿಂದ ಪ್ರಸಾರವಾಯಿತು. ಭಾರತದಲ್ಲಿ ಈ ವಿಷಯವನ್ನು ಕುರಿತು ಬರೆಯಲ್ಪಟ್ಟ ಮೊದಲ ನಾಟಕವು ಇದಾಗಿದೆ.

<u>1).ಕಾಮದಹನ</u> :- ಈ ನಾಟಕವು ಕೂಡ ಗುಜರಾತಿನ ಇತಿಹಾಸಕ್ಕೆ ಸಂಬಂಧಪಟ್ಟಿದೆ ಹಾಗೂ ಆಕಾಶವಾಣಿಯಲ್ಲಿ ಪ್ರಸಾರವಾಗಿದೆ. ಗುಜರಾತನ್ನು 12ನೇ ಶತಮಾನದಲ್ಲಿ ಕರ್ಣರಾಜ ವಾಗೇಲ ಎಂಬ ರಾಜನು ಆಳುತ್ತಿದ್ದನು. ಕಾರ್ತಿಕಮಾಸದಲ್ಲಿ ಈ ರಾಜ ಅಲಂಕೃತನಾಗಿ ಮಹಾದೇವನ ಮಂದಿರಕ್ಕೆ ಪೂಜೆಗಾಗಿ ಹೋಗಿ ಬರುವ ವಾಡಿಕೆ ಇದ್ದಿತು. ಅಂದು ಈತ ಅಲಂಕರಿಸಿಕೊಂಡು ಮೆರವಣಿಯಲ್ಲಿ ದೇವಸ್ಥಾನಕ್ಕೆ ಹೋಗುತ್ತಿದ್ದನು. ಆಗ ಇವನ ಅಕ್ಕ-ಪಕ್ಕದಲ್ಲಿ ಇವನ ಆಪ್ತರಾದ ಸೇನಾಪತಿಗಳು ಇರುತ್ತಿದ್ದರು. ಒಮ್ಮೆ ಈ ರಾಜ ಕಾರ್ತಿಕ ಸೋಮವಾರದ ಪೂಜೆಗೆ ರಾಜಧಾನಿ ಪಂಟಣದಿಂದ ಮೆರವಣಿಗೆಯಲ್ಲಿ ಹೊರಟನು. ಈತನ ಬಳಿ ಬಹಳ ಸಮರ್ಥನಾದ ಹಾಗೂ ದೇಶಭಕ್ತನಾದ ಮಾಧವ ಎಂಬ ಮಂತ್ರಿ ಇದ್ದನು. ಅವನು ರಾಜಕಾರಣದ ಕೆಲವು ಸಮಸ್ಯೆಗಳನ್ನು ಚರ್ಚಿಸಲು ಪಕ್ಕದ ರಾಜ್ಯಕ್ಕೆ ಹೋಗಿದ್ದನು. ಆತನ ಮನೆಯಲ್ಲಿ ಅವನ ತಮ್ಮ ಕೇಶವ. ಆತನ ವಯಸ್ಸಾದ ತಾಯಿ ಒಬ್ಬ ವಿಧೇಯನಾದ ಸೇವಕ ಹಾಗೂ ಪತ್ನಿ ಇದ್ದರು. ರಾಜನ ಮೆರವಣಿಗೆ ಬಂದಾಗ ಬೀದಿಯಲ್ಲಿ ಜನರು ತಮ್ಮ ಮನೆಗಳ ಹತ್ತಿರ ಬಾಗಿಲಲ್ಲಿ ಹಾಗೂ ಮಹಡಿಗಳ ಮೇಲೆ

ನಿಂತು ನೋಡುವ ಪದ್ಧತಿ ಇದ್ದಿತು. ಇಂತಹ ಸಂದರ್ಭಗಳಲ್ಲಿ ರಾಜಬೀದಿಯ ಎರಡು ಕಡೆ & ಮಹಡಿಗಳ ಕಡೆ ನೋಡುತ್ತಿದ್ದನು ಮತ್ತು ತನ್ನ ಮನಸ್ಸಿಗೆ ಬಂದ ರೀತಿಯಲ್ಲಿ ತನ್ನ ಆಪ್ತರಾಗಿದ್ದ ಸೇನಾಧಿಪತಿಗಳಿಗೆ ಸನ್ನೆ ಮಾಡುತ್ತ ಮುಂದುವರೆಯುತ್ತಿದ್ದನು. ಇದು ಅವನ ವಾಡಿಕೆಯಾಗಿತ್ತು. ಅಂದು ಕೂಡ ರಾಜ ಮೆರವಣಿಗೆಯನ್ನು ಮುಗಿಸಿ ಅರಮನೆಗೆ ಹಿಂತಿರುಗಿದ ಮೇಲೆ ರಾಜ ತನ್ನ ಆ ಸೇನಾಧಿಪತಿಯನ್ನು ಕರೆಸಿ ಆ ಮನೆಯ ಬಗ್ಗೆ ವಿಚಾರಿಸಿದನು. ಅವನ ಆಪ್ತ ಸೇನಾಧಿಪತಿ ಆ ಮನೆ ರಾಜ್ಯದ ಪ್ರಧಾನಿ ಮಾಧವರವರಿಗೆ ಸೇರಿದ್ದ ಎಂತಲೂ ರಾಜ ನೋಡಿ ಮೆಚ್ಚಿಕೊಂಡ. ಆ ಸ್ತ್ರೀ ಮಾಧವನ ಪತ್ನಿ ಪದ್ಮಿನಿ ಎಂತಲೂ, ಆ ಪ್ರಯತ್ನವನ್ನು ದಯವಿಟ್ಟು ಕೈ ಬಿಡಿ. ರಾಜನನ್ನು ಬಹುವಾಗಿ ಕೇಳಿಕೊಂಡನು. ಆದರೆ ಕಾಮಪೀಡಿತನಾಗಿದ್ದ ರಾಜನಿಗೆ ಈ ಮಾತು ಹಿಡಿಸಲಿಲ್ಲ. ರಾತ್ರಿಯೊಳಗೆ ಆಕೆಯನ್ನು ತನ್ನ ಶಯ್ಯಾಗಾರದಲ್ಲಿ ತಂದು ಒಪ್ಪಿಸಬೇಕೆಂದು ತನ್ನ ಆ ಆಪ್ತ ದಳಪತಿ ಕುಮಾರರಾಜನಿಗೆ ಅಪ್ಪಣೆ ಮಾಡಿದನು. ವಿಧಿಯಿಲ್ಲದೇ ಪದ್ಮಿನಿಯನ್ನು ಹೊತ್ತು ತರಲು ಸೈನಿಕರನ್ನು ಕುಮಾರರಾಜ ಕಳುಹಿಸಿದನು. ಇವರು ಮಹಾಮಂತ್ರಿಯ ಮನೆಗೆ ಹೋಗಿ ಪ್ರತಿಭಟಿಸಿದ ಅವನ ತಮ್ಮ ಕೇಶವನನ್ನು ಕೊಂದು ಹಾಕಿ ಪದ್ಮಿನಿಯನ್ನು ಹೊತ್ತು ಅರಮನೆಗೆ ತಮದು ಒಪ್ಪಿಸಿದರು. ರಾಜ ಬಹಳ ಸಂತೋಷದಿಂದ ಅವರಿಗೆಲ್ಲಾ ಬಹುಮಾನ ಕೊಟ್ಟನು ಮತ್ತು ಆ ರಾತ್ರಿ ಪದ್ಮಿನಿಯ ಮೆಲೆ ಮನಸೋ ಇಚ್ಛೆ ಅತ್ಯಾಚಾರ ನಡೆಸಿ ಆಕೆಯ ಮಾನಹಾನಿ ಮಾಡಿದನು.

ಈ ಎಲ್ಲಾ ದುರ್ಘಟನೆಗಳನ್ನು ಕಂಡು ಬಹಳವಾಗಿ ದುಃಖಿತನಾದ ಮಾಧವನ ಸೇವಕ ಆತನ ವೃದ್ಧ ತಾಯಿಯನ್ನು ತನ್ನ ಆಪ್ತರ ಬಳಿ ಕರೆ ತಂದು ಬಿಟ್ಟು ಅವಳ ರಕ್ಷಣೆ ಮಾಡುವಂತೆ ಕೇಳಿಕೊಂಡನು. ನಂತರ ಆತ ಈ ಸುದ್ದಿಯನ್ನು ಮಾಧವನಿಗೆ ತಿಳಿಸಲು ಪ್ರಯಾಣ ಮಾಡಿದನು ಮತ್ತು ಮಾಧವನಿಗೆ ಈ ಸುದ್ದಿ ತಲುಪಿಸಿದನು. ಇದರಿಂದ ತೀರ ದುಃಖಿತನು, ವಿಚಲಿತನು ಆದ ಮಾಧವ ಆ ತನ್ನ ವೃದ್ಧ ಮಾತೆಯನ್ನು ರಕ್ಷಿಸಬೇಕೆಂದು ಕೇಳಿಕೊಂಡು ಕೂಡಲೇ ಉತ್ತರದ ಕಡೆ ಪ್ರಯಾಣ ಮಾಡಿದನು. ಈ ರೀತಿ ಪ್ರಯಾಣ ಮಾಡಿ ದೆಹಲಿಯನ್ನು ತಲುಪಿದನು. ಆಗ ದೆಹಲಿಯಲ್ಲಿ ಅಲ್ಲಾವುದ್ದೀನ್ ಖಿಲ್ಜಿ ರಾಜನಾಗಿದ್ದನು. ಮಾಧವ ಚಕ್ರವರ್ತಿಯನ್ನು ಕಂಡು ತನಗೆ ಆದ ಅನ್ಯಾಯವನ್ನು ಹೇಳಿಕೊಂಡನು. ಇದೆನ್ನೆಲ್ಲಾ ಕೇಳಿ ಅಲ್ಲಾವುದ್ದೀನ್ ಖಿಲ್ಜಿ ಮಗ, ತನ್ನ ಮತ್ತು ಮುಖ್ಯ ಸೇನಾಧಿಪತಿಯವರ ಸಂಗಡ ಒಂದು ದೊಡ್ಡ ಸೈನ್ಯವನ್ನು ಗುಜರಾತಿನ ಮೇಲೆ ಆಕ್ರಮಣಕ್ಕೆ ಕಳುಹಿಸಿದನು. ಈ ಸೈನ್ಯದ ಜೊತೆಯಲ್ಲಿ ಮಾಧವನೂ ಪ್ರಯಾಣ ಮಾಡಿದನು. ಈ ಸೈನ್ಯದ ಆಕ್ರಮಣವನ್ನು ಕರ್ಣ ರಾಜ ಎದುರಿಸಲು ಆಗದೇ ಸೋತುಹೋದನು. ಬೀಕರವಾದ

ಯುದ್ಧ ನಡೆದು ಸಾವಿರಾರು ಜನ ಹತರಾದರು. ಕರ್ಣ ರಾಜರನ್ನು ಸೆರೆ ಹಿಡಿಯಲಾಯಿತು. ಅವರ ಜೊತೆಯಲ್ಲಿ ಮಾಧವನ ಪತ್ನಿ ಪದ್ಮಿನಿಯು ಇದ್ದಳು. ಈ ಗಲಭೆಗಳಲ್ಲಿ

ರಾಣಿ ಕೌಲದೇವಿ ಅರಮನೆಗೆ ಮತ್ತು ಸೇನಗಾರಕ್ಕೆ ಬೆಂಕಿ ಇಟ್ಟಳು. ಖಿಲ್ಜಿ ಕಡೆಯ ಸೈನ್ಯ ಕರ್ಣರಾಜನ ಪತ್ನಿ ಕೌಲದೇವಿ ಮತ್ತು ಮಗಳನ್ನು ದೆಹಲಿಗೆ ಕರೆದುಕೊಂಡು ಹೋಗಿ ಅಲ್ಲಾವುದ್ದಿನ್‌ಗೆ ಒಪ್ಪಿಸಿದರು. ಆತ ಕೌಲದೇವಿಯನ್ನು ತನ್ನ ಅಂತಃಪುರಕ್ಕೆ ಸೇರಿಸಿಕೊಂಡು ಆಕೆಯ ಮಗಳನ್ನು ತನ್ನ ಮಗನ ಅಂತಃಪುರಕ್ಕೆ ಕಳುಹಿಸಿದನು.

ಪದ್ಮಿನಿಯ ಬಳ ಮಾಧವ ಬಂದಾಗ ನನ್ನನ್ನು ಮುಟ್ಟಬೇಡ ನಾನು ಎಂಜಲು ಎಂದು ಹೇಳುತ್ತ ಪದ್ಮಿನಿ ಬೆಂಕಿಗೆ ಹಾರಿಕೊಳ್ಳುವ ಮುನ್ನ ರಾಜ ಕರ್ಣನನ್ನು ಇರಿದು ಕೊಂದಳು. ಮಾಧವ ಮಂತ್ರಿ ಆ ನೆಲಕ್ಕೆ ಪ್ರಾಣಾಮ ಮಾಡಿ ಇಲ್ಲಿಗೆ ನನ್ನ ನಿನ್ನ ಋಣ ತಿರಿತು ಎಂದು ಹೇಳಿ ತನ್ನ ಸೇವಕನಿಗೆ ತನ್ನಲ್ಲಿದ್ದ ಹಣವನ್ನು ಕೊಟ್ಟು ತಾಯಿಯನ್ನು ರಕ್ಷಿಸಬೇಕೆಂದು ಹೇಳಿ ಆ ಊರನ್ನು ತ್ಯಜಿಸಿ ಹೋದನು.

**3) ಸರ್ಜಾ ಹನುಮಪ್ಪ ನಾಯಕ**

ಮೈಸೂರಿನ 4ನೇ ಯುದ್ಧದಲ್ಲಿ ಬ್ರೀಟಿಷರ ಜೊತೆ ಹೋರಾಡಿ ಟಿಪ್ಪು ಸುಲ್ತಾನ್ ದುರಂತ ಮರಣವನ್ನು ಹೊಂದಿ ತನ್ನ ದೇಶಕ್ಕಾಗಿ ಬಲಿಯಾದನು. ಆತನ ಮರಣದ ನಂತರ ಮೈಸೂರು ಸೀಮೆಯಲ್ಲಿ ಬ್ರೀಟಿಷರ ವಿರುದ್ಧ ದಂಗೆಗಳು ಪ್ರಾರಂಭವಾದವು. ತರೀಕೆರೆಯಲ್ಲಿ, ನಗರದಲ್ಲಿ, ವೇಲೂರಿನಲ್ಲಿ ಮತ್ತು ಚನ್ನಗಿರಿಯಲ್ಲಿ ಕ್ರಮವಾಗಿ ಸರ್ಜಾ ರಂಗಪ್ಪನಾಯಕ ಮತ್ತು ಅವನ ಮಗ ಸರ್ಜಾ ಹನುಮಪ್ಪನಾಯಕ, ನಗರದಲ್ಲಿ ಬೂದಿ ಬಸಲೂಪ್ಪ ನಾಯಕ, ಚೆನ್ನಗಿರಿಯಲ್ಲಿ ದೊಂಡಿಯಾವಾಗ್ ವೇಲೂರಿನಲ್ಲಿ ಟಿಪ್ಪುವಿನ ಹಿರಿಯ ಮಗ ಪಥೇ ಹೈದರ್ ದಂಗೆ ಎದ್ದರು. ಇವರೆಲ್ಲರಿಗೂ ಜನರ ಬೆಂಬಲ ಇದ್ದಿತು. ಈ ರೀತಿ ಬ್ರೀಟಿಷರ ಮೇಲೆ ಸರಣಿಯಾಗಿ ಹೋರಾಟ ನಡೆಸಿದವರು ಮೈಸೂರು ಸೀಮೆಯ ಜನ, ಇದು ಇವರ ದೇಶ ಭಕ್ತಿಯ ಒಂದು ಮಾದರಿ ಉದಾಹರಣೆಯಾಗಿದೆ.

ಸರ್ಜಾ ರಂಗಪ್ಪನಾಯಕ ಮತ್ತು ಅವನ ಮಗ ಬ್ರಿಟಿಷರ ಮೇಲೆ ತಮ್ಮ ನೆಲೆಯಾಗಿದ್ದ ಕಾಮನದುರ್ಗಾದಿಂದ ಹೋರಾಟ ನಡೆಸಿದರು. ನಡೆದ ಘರ್ಷಣೆಯಲ್ಲಿ ಕೆಲವು ಅವಸರದ ದಾಳಿಗಳಿಂದ ಸರ್ಜಾರಂಗಪ್ಪ ನಾಯಕ ಸೆರೆಸಿಕ್ಕಿದನು ಹಾಗೂ ಮೃತಪಟ್ಟನು. ಈತನ ಮರಣದ ನಂತರ ಈ ಹೋರಾಟವನ್ನು ಆತನ ಮಗ ಸರ್ಜಾ ಹನುಮಪ್ಪ ನಾಯಕ ಅನೇಕ ತಿಂಗಳವರೆಗೆ ಮುಂದುವರಿಸಿದನು. 2 ಬಾರಿ ಇಂಗ್ಲೀಷರನ್ನು ಮತ್ತು ಅವರ ಸಹಾಯಕ್ಕೆ ನಿಂತಿದ್ದ ಮೈಸೂರು ಸೈನ್ಯವನ್ನು ಸೋಲಿಸಿದನು. ಆಗಾ ಬ್ರಿಟಿಷರು ಇಬ್ಬರು ಬ್ರಾಹ್ಮಣ ಅಧಿಕಾರಿಗಳಾದ ಅಮೀಲ ಗೋವಿಂದರಾಯ ಮತ್ತು ಅಮೀಲವೆಂಕಟಸುಬ್ಬಯ್ಯ ಎಂಬುವವರ ಸಹಾಯದಿಂದ ನಾಯಕನ ಪ್ರೇಯಸಿಯಾಗಿದ್ದ ರಂಗಮ್ಮನನ್ನು ಹಣಕೊಟ್ಟು ತಮ್ಮ ಕಡೆಗೆ ಮಾಡಿಕೊಂಡರು

ಆಕೆ ನಾಯಕನಿಗೆ ವಿಷಪೂರಿತ ಆಹಾರ ತಿನ್ನಿಸಿ ಸುದ್ದಿಯನ್ನು ಶತ್ರುಗಳು ತಿಳಸಿದಳು. ಅಕೆ ಪ್ರಜ್ಞಾವಸ್ಥೆಯಲ್ಲಿ ಎಚ್ಚುತ್ತ ನಾಯಕ ಒಂಟಿಯಾಗಿ ಸೈನ್ಯದೊಡನೆ ಹೋರಾಟಮಾಡಿ ಸೆರೆಸಿಕ್ಕಿದನು. ಇವನನ್ನು ಬೆಂಗಳೂರಿಗೆ ಒಯ್ದು ಸೆರೆಯಲ್ಲಿಟ್ಟರು. ಆಗ ಬೆಂಗಳೂರಿನಲ್ಲಿದ್ದ ಬ್ರಿಟಿಷ್ ಅಧಿಕಾರಿ ಮಾರ್ಕಕಬ್ಬನ್ ತಮಗೆ ಶರಣಾದರೆ ಕ್ಷಮಿಸಿ ಸಾಮಾಂತನನ್ನಾಗಿ ಇಟ್ಟುಕೊಳ್ಳುತ್ತೇವೆ. ಎಂದನು ಅದನ್ನು ನಿರಾಕರಿಸಿದ ಹನುಮಪ್ಪನಾಯಕನನ್ನು ಗಲ್ಲಿಗೆ ಏರಿಸಿದರು. ಈತ ತನ್ನ ದೇಶಕ್ಕಾಗಿ ಪ್ರಾಣಾರ್ಪಣೆ ಮಾಡಿದನು.

**(4) ಶಪ್ತದ್ವಾರವತಿ** :- ಹೊಯ್ಸಳ ಸಾಮ್ರಾಟರಲ್ಲಿ ಕೊನೆಯ ಪ್ರಸಿದ್ಧ ರಾಜ ಮೂರನೆಯ ಬಲ್ಲಾಳ, ಹರಿಯಲಾದೇವಿ ಆತನ ಸೋದರಿ ವೀರವಿಷ್ಣು ಮತ್ತು ಲಕ್ಷ್ಮಣ ಅವಳ ಮಕ್ಕಳು. ಬಲ್ಲಾಳನ ಮೂರನೇ ಹೆಂಡತಿ ತಿರುಮಲಾದೇವಿ. ಒಮ್ಮೆ ಆತ ರಾಜಕಾರ್ಯಕ್ಕಾಗಿ ಪರದೇಶಕ್ಕೆ ಹೋಗಿದ್ದನು. ವೀರವಿಷ್ಣು ಮತ್ತು ಲಕ್ಷ್ಮಣ ತಮ್ಮ ಸೋದರ ಮಾವನಾದ ಬಲ್ಲಾಳನ ಊರನ್ನು ನೋಡಿಕೊಂಡು ಬರುತ್ತೇವೆ ಎಂದು ಹಠ ಹಿಡಿದು ಹೊರಟರು. ಇವರು ಹಳೇಬೀಡಿಗೆ ಬಂದಾಗ ಬಹಳ ದಣಿದಿದ್ದರು. ದಣಿವನ್ನು ಆರಿಸಿಕೊಳ್ಳಲು ಅರಮನೆಯ ಉದ್ಯಾನದ ಲತಾಗೃಹದಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು. ವೀರ ಬಲ್ಲಾಳನಿಗೆ ವಯಸ್ಸಾಗಿತ್ತು. ತಿರುಮಲಾದೇವಿ ಆತನ ಚಿಕ್ಕ ವಯಸ್ಸಿನ ರಾಣಿ. ಈ ಹುಡುಗರು ವಿಶ್ರಾಂತಿ ಪಡೆಯುತ್ತಿದ್ದಾಗ ತಿರುಮಲಾದೇವಿ ತಿರುಗಾಡುತ್ತ ಉದ್ಯಾನವನಕ್ಕೆ ಬಂದಳು. ಯುವಕರು ಸ್ಫುರದ್ರೂಪಿಗಳಾದ ಈ ಕುಮಾರರನ್ನು ನೋಡಿದಾಗ ಅವಳ ಆಸೆ ಗರಿಗೆದರಿತು. ಅವಳು ಹಿರಿಯ ಕುಮಾರ, ವಿಷ್ಣುವಿನ ಮೇಲೆ ಬಿದ್ದು ಅವನನ್ನು ಬಲಾತ್ಕರಿಸಿ ತೊಡಗಿದಳು. ಅದೇ ಸಮಯಕ್ಕೆ ತಿರುಮಲ ಅರಮನೆಯಲ್ಲಿ ಕಾಣದೇ ಅವಳನ್ನು ಹುಡುಕುತ್ತ ಉದ್ಯಾನಕ್ಕೆ ಬಂದನು. ಅಲ್ಲಿ ಯುವಕನ ಮೇಲೆ ಬಿದ್ದಿದ್ದ ತಿರುಮಲೆಯನ್ನು ಕಂಡು ಕೋಪದಿಂದ ಅವರಿಬ್ಬರನ್ನು ಬಂಧಿಸಿ ಸೆರೆಮನೆಗೆ ಕಳುಹಿಸಿದನು. ಅನಂತರ ಯಾವುದನ್ನು ವಿಚಾರಿಸದೇ ಅವರಿಬ್ಬರನ್ನು ಮಾರನೆಗೆ ಶೂಲಕ್ಕೆ ಏರಿಸಲು ಆಜ್ಞೆ ಮಾಡಿದನು. ಮಕ್ಕಳ ಮರಣದ ನಂತರ ಆತನ ಅಕ್ಕ ಹರಿಯಲಾದೇವಿ ಹಳೇಬಿಡಿಗೆ ಬಂದಳು. ರಾಜ ಅವಳಿಗೆ ಯಾರೂ ಊರಿನಲ್ಲಿ ಅನ್ನ ಪಾನೀಯಗಳನ್ನು ಕೊಡಬೇಡಿ ಎಂದು ಆಜ್ಞೆ ಮಾಡಿದರು. ನೀರಿಗಾಗಿ ಊರೆಲ್ಲ ಬೇಡಿ ಯಾರೂ ನೀರು ಕೊಡದಿದ್ದಾಗ ಕುಂಬಾರಗೇರಿಯ ಒಬ್ಬಳು ಸ್ತ್ರೀ ಆಕೆಗೆ ನೀರನ್ನ ಕೊಟ್ಟಳು. ಹರಿಯಲೆ ಅ ಊರಿನ ಮೇಲೆ ಮತ್ತು ರಾಜನ ಮೇಲೆ ಶಾಪ ಹಾಕಿ ಹಳೇಬೀಡು ಹಾಳಾದರೂ ಕುಂಬಾರಗೇರಿ ಉಳಿಯಲಿ ಎಂದಳು. ಈ ರೀತಿ ಮೂರನೇ ಬಲ್ಲಾಳ ತನ್ನ ಶತ್ರುಗಳ ದಾಳಿಗೆ ಸಿಕ್ಕಿ ಹಳೇಬೀಡಿನಿಂದ ಪಲಾಯನ ಮಾಡಿದನು. ಈ ನಾಟಕವನ್ನು ಶಪ್ತದ್ವಾರಾವತಿ ಹೆಸರಿನಿಂದ ರಚಿಸಿದ್ದಾರೆ. ಆಕಾಶವಾಣಿಯಲ್ಲಿ ಪ್ರಸಾರವಾಗಿದೆ.

**(5) ಗಂಗನ ಚುಕ್ಕಿ** :- ಗಂಗರಾಜ ಶಿವನ ಸಮುದ್ರದ ಅರಸ. ಈತನಿಗೆ [ಚಿಕ್ಕರಾಯ [ಮದ್ದೂರಿನ ಅರಸ ಮತ್ತು ಮೂಗೂರ್ತರಾಯ ನಗರ ಕೆರೆಯ ಅರಸ ಎಂಬ ಇಬ್ಬರು ಅಳಿಯಂದಿರು] ಈತನ ಕೋಟೆಗೆ ಕಂಚಿನ ಬಾಗಿಲು ಇದ್ದಿತು. ಕೋಟೆಯನ್ನು ತೆರೆಯುವಾಗ ಅದಕ್ಕೆ ಕಟ್ಟಿದ್ದ ಕಂಚಿನ ಗಂಟೆಗಳು ಶಬ್ಧಮಾಡುತ್ತಿದ್ದವು. ಅದು ಬಹುದೂರದವರೆಗೆ ಕೇಳಸುತ್ತಿತ್ತು. ಇದರಿಂದ ಆ ಗಂಗರಾಜನ ಹೆಸರು ಸುತ್ತ ಹರಡಿತ್ತು. ಅವನ ಇಬ್ಬರು ಹೆಣ್ಣು ಮಕ್ಕಳು ತಮ್ಮ ಗಂಡಂದಿರನ್ನು ಈ ಮಾತು ಹೇಳಿ ಪದೇ - ಪದೇ ಛೇಡಿಸುತ್ತಿದ್ದರು. ಇದರಿಂದ ಅವರಿಬ್ಬರು ಕೃದ್ಧರಾದರು. ಹಾಗೂ ತಮ್ಮ ಹೆಂಡತಿಯರ ಚುಚ್ಚು ಮಾತು ಮತ್ತು ಭರ್ತ್ಯನಗಳನ್ನು ತಪ್ಪಿಸಿಕೊಳ್ಳಬೇಕೆಂದು ಯೋಚನೆ ಮಾಡಿ ಅವನ ಮೇಲೆ ದಂಡೆತ್ತಿ ಹೋಗಬೇಕೆಂದು ತಿರ್ಮಾನಿಸಿದರು. ಅದೇ ರೀತಿ ಇವರಿಬ್ಬರು ಸೇರಿ ಗಂಗರಾಜನ ಮೇಲೆ ದಂಡೆತ್ತಿ ಹೋದರು ಹಾಗೂ ನಡೆದ ಘೋರ ಯುದ್ಧದಲ್ಲಿ ಗಂಗರಾಜನಿಗೆ ಸೋಲಾಯಿತು. ಇದರಿಂದ ಮನನೊಂದು ಗಂಗರಾಜ ಕುದುರೆಯ ಮೇಲೆ ಏರಿ ಕಾವೇರಿಯ ಕಡೆಗೆ ಧಾವಿಸಿ ಅದರ ಜಲಪಾತದ 'ಮೇಲಿನಿಂದ ಕುದುರೆಯನ್ನು ಹಾರಿಸಿ ನದಿಗೆ ಬಿದ್ದನು. ಈ ಜಲಪಾತಕ್ಕೆ ಅವನ ನೆನಪಾಗಿ ಗಂಗನ ಚುಕ್ಕಿ ಎಂದು ಹಸರಿಟ್ಟರು. ಹಾಗೂ ಒಂದು ಜಾನಪದ ಹೇಳಿಕೆಯಂತೆ ಮೇಲಿನಿಂದ ಹಾರಿದ ಕುದುರೆಯ ಗೊರಸುಗಳು ಕೆಳಗೆ ನದಿಯ ಪಕ್ಕದ ಒಂದು ಬಂಡೆಯ ಮೇಲೆ ಮೂಡಿವೆ' ಎಂದು ಹೇಳುತ್ತಾರೆ. ಈ ರೀತಿ ಕೇವಲ ತಮ್ಮ ಪ್ರತಿಷ್ಠೆಯನ್ನು ಕಾಪಾಡಿಕೊಳ್ಳಲು ಈ ಇಬ್ಬರು ರಾಜರು ಮಾಡಿದ ಈ ಕರ್ಮದಿಂದ ನೊಂದು ಅವರ ಪತ್ನಿಯರು ಆತ್ಮಹತ್ಯೆ ಮಾಡಿಕೊಂಡರು ಹೀಗೆ ಒಣ ಪ್ರತಿಷ್ಠೆಗಾಗಿ ಮೂರು ಸಂಸಾರಗಳು ನಾಶವಾದ ಕಥೆ ಈ ವಸ್ತುವಾಗಿದೆ. ಇದು ಕೂಡ ಆಕಾಶವಾಣಿಯಲ್ಲಿ ಪ್ರಸಾರವಾಗಿದೆ.

**6) ಸಿರ್ಯಾ ಸೂರಹೋಯಿತು** :- ದೇವನ ಸಿರ್ಯಾದ ನಾಯಕ ರಂಗಪ್ಪನಾಯಕ ಆತನ ಸೋದರ ಮಾವ ತರೀಕೆರೆಯ ಪೂವಲ ಹನುಮಪ್ಪನಾಯಕ ಒಮ್ಮೆ ಹನುಮಪ್ಪನಾಯಕ ತನ್ನ ಬಂಧುಗಳನ್ನು ನೋಡಲು ಸಿರ್ಯಾಕ್ಕೆ ಬರುತ್ತಾನೆ. ಅವನನ್ನು ಸ್ವಾಗತಿಸಿ ರಂಗಪ್ಪನಾಯಕ ತನ್ನ ಅರಮನೆಯಲ್ಲಿ ಇಳಿಸಿಕೊಳ್ಳುತ್ತಾನೆ. ಆ ರಾತ್ರಿ ಆತ ಬೇಸರ ಕಳೆಯುವ ಸಲುವಾಗಿ ಇಬ್ಬರು ಪಗಡೆ ಆಟಕ್ಕೆ ಕುಳಿತುಕೊಳ್ಳುತ್ತಾರೆ. ದೇವನ ಸಿರ್ಯಾದ ರಂಗಪ್ಪನಾಯಕನ ಪೂರ್ವಿಕರು ವಿಜಯನಗರದ ಸಾಮಾಂತರು ಮತ್ತು ಪಗಡೆ ಆಟದಲ್ಲಿ ಬಹಳ ನುರಿತಿದ್ದವರು. ಇವರು ವಿಜಯನಗರಕ್ಕೆ ಒಮ್ಮೆ ಹೋಗಿದ್ದಾಗ ವಿಜಯನಗರದ ಸಾಮ್ರಾಟರೊಡನೆ ಪಗಡೆ ಆಡಿ ಅದರಲ್ಲಿ ಗೆಲ್ಲುತ್ತಾರೆ. ಅದರಿಂದ ಸಂತೋಷಗೊಂಡ ಸಾಮ್ರಾಟರು ತಮ್ಮ ರತ್ನಾಭರಣ ಖಚಿತವಾದ ಪಗಡೆದಾಳಗಳನ್ನು ಹಾಸನ್ನು ಇವರಿಗೆ ತಮ್ಮ ಉಡುಗೊರೆಯಾಗಿ ಕೊಡುತ್ತಾರೆ. ಈ ದಿನ ಇವರು ತಮ್ಮ ಆಟಕ್ಕೆ ಅದೇ ದಾಳಗಳನ್ನು ಮತ್ತು ಹಾಸನ್ನು ಉಪಯೋಗಿಸುತ್ತಾರೆ. ಆಟ ನಡೆದು ಅದರಲ್ಲಿ ಪೂವಲ ಹನುಮಪ್ಪನಾಕ ಗೆಲ್ಲುತ್ತಾನೆ. ಪಣಕ್ಕೆ ಒಪ್ಪಿಕೊಂಡ ರಂಗಪ್ಪನಾಯಕ ಅವನ ಇಷ್ಟವನ್ನು

ನೇರವೇರಿಸಬೇಕಾಗುತ್ತದೆ. ನಿನಗೆ ಏನು ಬೇಕು ಹೇಳು ಎಂದು ಕೇಳಿದಾಗ ಪೂವಲ ಹನುಮಪ್ಪನಾಯಕ ನನ್ನ ಸೇವೆಗೆ ನಿನ್ನ ತಂಗಿಯನ್ನು ಕಳುಹಿಸು ಎನ್ನುತ್ತಾನೆ. ಮಾತು – ಮಾತು ಬೆಳೆದು ವಿಕೋಪಕ್ಕೆ ಹೋಗುತ್ತದೆ. ತಾನು ಕೊಟ್ಟ ಮಾತನ್ನು ನೇರವೇರಿಸಲು ನಿಶ್ಚಯ ಮಾಡಿ ಅಂತಃಪುರಕ್ಕೆ ಹೋಗಿ ತನಗೆ ಒದಗಿದ ಇಕ್ಕಟ್ಟನ್ನು ತನ್ನ ತಾಯಿ ಮತ್ತು ತಂಗಿಯರಿಗೆ ತಿಳಿಸುತ್ತಾನೆ. ಅಣ್ಣನ ಪರಿಸ್ಥಿತಿಯನ್ನು ಅರಿತ ಆತನ ತಂಗಿ ಹನುಮಪ್ಪನಾಯಕನ್ನು ಕರೆದು ಕೊಂಡು ಬಾ. ನಾನು ಅವನನ್ನು ಸ್ವಾಗತಿಸುತ್ತೇನೆ. ಎಂದು ಹೇಳುತ್ತಾಳೆ. ಅದೇ ಪ್ರಕಾರ ರಂಗಪ್ಪನಾಯಕ ಹೋಗಿ ಅವನನ್ನು ಕರೆತರುತ್ತಾನೆ. ತಾನು ಎಲೆ ಅಡಿಕೆ ಹಾಕಿಕೊಂಡಿದ್ದ ಎಂಜಲು ತುಂಬಲವನ್ನು ಸುರಿದು ಅದರ ಮೇಲೆ ಪನ್ನೀರನ್ನು ಪ್ರೋಕ್ಷಿಸಿ. ಆ ತಂಬಿಗೆ ಮತ್ತು ಸಖಿಯರ ಸಹಿತ ಹೋಗಿ ಪೂವಲ ಹನುಮಪ್ಪನನ್ನು ಸ್ವಾಗತಿ ಆ ತಂಬಿಗೆಯನ್ನು ಅವನ ಕೈಗೆ ಕೊಟ್ಟು ಈ ನೀರನ್ನು ಸ್ವಲ್ಪ ಕುಡಿದು ಉಳಿದುದನ್ನು ನಿಮ್ಮ ತಲೆಯ ಮೇಲೆ ಪ್ರೋಕ್ಷಿಸಿಕೊಳ್ಳಿ ಎನ್ನುತ್ತಾಳೆ. ಹನುಮಪ್ಪನಾಯಕ ತನ್ನ ಅಂಗೈಗೆ ಆ ನೀರನ್ನು ಸುರಿದು ಒಂದೆರಡು ಗುಡುಕು ಕುಡಿಯುತ್ತಾನೆ. ಆತನಿಗೆ ಅನುಮಾನ ಬರುತ್ತದೆ. ರಂಗಪ್ಪನ ಕಡೆ ತಿರುಗಿ ಏನಿದು ಈ ನೀರಿನ ರುಚಿ ಹೇಗೋ ಇದೆಯಲ್ಲ ಎಂದು ಕೇಳುತ್ತಾನೆ. ಆಗಾ ರಂಗಪ್ಪ 'ತುಂಬುಲದ ಎಂಜಲು ಇನ್ನು ಹೇಗಿರುತ್ತದೆ ಮಾವ' ಎನ್ನುತ್ತಾನೆ. ಮಾತಿಗೆ ಮಾತು ಬೆಳೆದು ವಿಕೋಪಕ್ಕೆ ಹೋಗುತ್ತದೆ ಅಲ್ಲಿಂದ ಸಿಟ್ಟು ಮಾಡಿಕೊಂಡು ತರೀಕೆರೆಗೆ ಹಿಂತಿರುಗಿ ಕೂಡಲೇ ಬಿಜಾಪುರಕ್ಕೆ ಸುದ್ಧಿಕೊಟ್ಟು ಅವರನ್ನು ಕರೆಸಿಕೊಂಡು ಸಿರ್ಯಾದ ಮೇಲೆ ದಾಳಿಮಾಡುತ್ತಾನೆ. ಈ ಹೋರಾಟದಲ್ಲಿ ಸಿರ್ಯಾದ ನಾಯಕ ಗಾಯಗೊಳ್ಳುತ್ತಾನೆ. ಅದೇ ರಣರಂಗದಲ್ಲಿ ಗಂಡಸಿನ ವೇಷ ಧರಿಸಿ ಆತನ ತಂಗಿ ರಂಗೋಜಿ ಅವನ ಸಹಾಯಕ್ಕೆ ಧಾವಿಸುತ್ತಾಳೆ. ಮತ್ತು ಹೋರಾಡುತ್ತ ಘಾಸಿಯಾಗಿ ಉರುಳುತ್ತಾನೆ. ಅಸಮಯಕ್ಕೆ ಸರಿಯಾಗಿ ಪೂವಲ ಹನುಮಪ್ಪನಾಯಕ ಅಲ್ಲಿಗೆ ಬಂದು ಅ ಮೃತ ದೇಹಗಳನ್ನು ಒಯ್ಯಲು ಪ್ರಯತ್ನ ಪಡುತ್ತಾನೆ. ಅಸಮಯಕ್ಕೆ ಬಿಜಾಪುರದ ಮಹಾಸೇನಾನಿ ರಣದುಲ್ಲಾಖಾನ್ ಅಲ್ಲಿಗೆ ಬಂದು ವಿಷಯ ತಿಳಿದು ಅದೇಹಗಳನ್ನು ತನ್ನ ಸುಪರ್ದಿಗೆ ತೆಗೆದುಕೊಂಡು ಸಿರ್ಯಾದವರು ಬಂದರೆ ಅವರಿಗೆ ಒಪ್ಪಿಸಿಬಿಡಿ ಎಂದು ತನ್ನ ಕಡೆಯವರನ್ನು ಕಾವಲು ಹಾಕಿ ಪೂವಲ ಹನುಮಪ್ಪನಾಯಕನ್ನು ಅಲ್ಲಿಂದ ಹೊರಟು ಹೋಗುವಂತೆ ಅಜ್ಞೆ ಮಾಡುತ್ತಾನೆ. ಈ ನಾಟಕವು ಕೂಡ ಆಕಾಶವಾಣಿಯಲ್ಲಿ ಪ್ರಸಾರವಾಗಿದೆ. 

**7) ಮೃತ್ಯು ಪೆಂಡೆಯ :–** ಈ ನಾಟಕವು ಜನಜನಿತವಾದ ತೊಣ್ಣೂರು ರಾಕ್ಷಸಿಯ ಕಥೆಗೆ ಸಂಬಂಧಿಸಿದೆ. ಈ ಕಥೆಯ ಪ್ರಕಾರ ತೊಂಡನೂರಿನಲ್ಲಿ ತೊಣ್ಣೂರು ರಾಕ್ಷಸಿ ಎಂಬ ಒಬ್ಬಳೂ ಸ್ತ್ರೀ ಆಳ್ವಿಕೆ ನಡೆಸುತ್ತಾ ಇರುತ್ತಾಳೆ. ಆಕೆ ಬಹಳ ದರ್ಪಿಷ್ಟ ಮತ್ತು ಶಕ್ತಿಶಾಲಿ ಸ್ತ್ರೀ. ಆಕೆಯ ಪತಿ ದುರ್ಬಲ ಅವಳ ತಮ್ಮ ಬೊಮ್ಮರಸ ಇವಳಿಗೆ ಪುಂಡರೀಕಾಕ್ಷಿ ಎಂಬ ಮಗಳು. ಇವಳು

ಮಗಳನ್ನು ತನ್ನ ತಮ್ಮನಿಗೆ ಮದುವೆ ಮಾಡಿಕೊಡಬೇಕೆಂದು ತಿರ್ಮಾನ ಮಾಡುತ್ತಾಳೆ. ಆದರೆ ಇದಕ್ಕೆ ಮಗಳು ಸಮ್ಮತಿಸದೆ ಪ್ರಾಣ ಹತ್ಯೆ ಮಾಡಿಕೊಳ್ಳಬೇಕೆಂದು ಆ ಊರಿನಲ್ಲಿದ್ದ ಕುಂಬಿನಿದೇವಿಯ ದೇವಾಲಯಕ್ಕೆ ಬರುತ್ತಾಳೆ. ಆಗ ಮೋಡ ಕವಿದು ಮಳೆ ಪ್ರಾರಂಭವಾಗುತ್ತದೆ. ಇವಳು ದೇವಿಯ ಮುಂದೆ ನಿಂತು ಆತ್ಮಹತ್ಯೆ ಮಾಡಿಕೊಳ್ಳಲು ಚೂರಿಯನ್ನು ತೆಗೆದುಕೊಂಡಾಗ ಯಾರೋ ಒಳಕ್ಕೆ ಪ್ರವೇಶ ಮಾಡಿ ಇವಳನ್ನು ತಡೆಯುತ್ತಾನೆ. ಅವರಿಬ್ಬರು ಪರಸ್ಪರ ಒಪ್ಪಿಕೊಂಡು ಅ ದೇವತೆಯ ಎದುರಿನಲ್ಲಿ ಮದುವೆಯಾಗುತ್ತಾರೆ. ಆ ಯುವಕನೇ ಕರಿಭಂಟ ಆತನು ದೂರದ ದಾರಪುರದಿಂದ ಇಲ್ಲೇ ಹತ್ತಿರದ ಹಳೇಬಿಡಿನಲ್ಲಿ ನಡೆಯುತ್ತಾ ಇದ್ದ ಒಂದು ಸ್ವಯಂವರಕ್ಕೆ ಆ ಮಂತ್ರಿತನಾಗಿ ಬಂದು ಮಳೆಯ ಕಾರಣ ಗುಡಿಯನ್ನು ಪ್ರವೇಶ ಮಾಡುತ್ತಾನೆ. ಆ ರಾಸ್ಪೀ ವಿಷಯವನ್ನು ನನ್ನ ತಾಯಿಗೆ ತಿಳಸುತ್ತಾಳೆ. ಆಗ ಸುಮ್ಮನಿಧ್ಧ ಅವಳ ತಾಯಿ ರಾತ್ರಿ ಮಲಗುವಾಗ ಮದುಮಗ ಒಬ್ಬನನ್ನು ಮಲಗಿಸಬಾರದೆಂದು ಅವನ ಪಕ್ಕದಲ್ಲಿ ತನ್ನ ತಮ್ಮ ಬೊಮ್ಮರಸವನ್ನು ಮಲಗಿಸುತ್ತಾಳೆ. ರಾತ್ರಿ ಆಕೆ ಕತ್ತಲಲ್ಲಿ ಒಂದು ಕರಿಭಂಟನ ಕಾಲಿಗೆ ಒಂದು ಪೆಂಡೆಯ ಕಟ್ಟುತ್ತಾಳೆ. ಆಕೆ ಹೋದ ಮೇಲೆ ಆ ಪೆಂಡೆಯವನ್ನು ಬಿಚ್ಚಿ ಪುಂಡರೀಕಾಕ್ಷಿ ಬೊಮ್ಮರಸನ ಕಾಲಿಗೆ ಕಟ್ಟುತ್ತಾಳೆ. ನಡು ರಾತ್ರಿಯಲ್ಲಿ ಅವಳ ತಾಯಿ ಬಂದು ಪೆಂಡಯವನ್ನು ಗುರುತಿಸಿ ಅದನ್ನು ಕಟ್ಟಿಸಿಕೊಂಡಿದ್ದ ವ್ಯಕ್ತಿಯನ್ನು ಕೊಲ್ಲುತ್ತಾಳೆ ಇದನ್ನೆಲ್ಲ ನಿದ್ರೆ ಮಾಡದೆ ನೋಡಿ ಸಮ್ಮನೇ ಮಲಗಿದ್ಧ ಪುಂಡರೀರಾಕ್ಷಿ. ತಾಯಿ ಹೊರಟು ಹೋದ ಮೇಲೆ ಕರಿಭಂಟನನ್ನು ಎಚ್ಚರಿಸಿ ಕೂಡಲೇ ಅಲ್ಲಿಂದ ಹೊರಟು ಹೋಗು ಎಂದು ಕಳುಹಿಸುತ್ತಾಳೆ. ಬೆಳಗ್ಗೆ ಈ ಅನಾಹುತವನ್ನು ಕಂಡ ಆಕೆಯ ತಾಯಿ ಹುಡುಕುತ್ತ ಹೊರಟು ಸುಂಕತೊಣ್ಣೂರಿನಲ್ಲಿ ಕರಿಭಂಟನನ್ನು ಹಿಡಿದು ಕೊಲೆ ಮಾಡುತ್ತಾಳೆ. ಈ ಘಟನೆಗಳನ್ನು ಆಧರಿಸಿ ಈ ನಾಟಕವನ್ನು ರಚಿಸಿದ್ದಾರೆ. ಇದು ಆಕಾಶವಾಣಿಯಲ್ಲಿ ಪ್ರಸಾರವಾಗಿದೆ.

**8) ಖಂಡೆರಾಯ** :- ಮೈಸೂರಿನಲ್ಲಿ ನಂಜರಾಜಯ್ಯ ಸರ್ವಾಧಿಕಾರಿಯಾಗಿದ್ದಾಗಿ ಇಮ್ಮಡಿ ಕೃಷ್ಣರಾಜ ಒಡೆಯರು ರಾಜರಾಗಿದ್ದರು. ದೇವರಾಜಯ್ಯ ದಳಪತಿಯಾಗಿದ್ದರು. ಆ ಕಾಲದಲ್ಲಿ ನಡೆದ ಅನೇಕ ರಾಜಕೀಯ ವಿದ್ಯಾಮಾನಗಳಂದ ಸೈನ್ಯವನ್ನು ಅದೀನದಲ್ಲಿ ಇರಿಸಿಕೊಳ್ಳುವುದು ಕಷ್ಟವಾಯಿತು. ಪದೇ - ಪದೇ ಕಪ್ಪು ವಸೂಲಿಗಾಗಿ ಹೈದರಬಾದಿನವರು ಮತ್ತು ಮರಾಠಿಯವರು ಮುತ್ತಿಗೆ ಹಾಕುತ್ತಿದ್ದರು. ಬೊಕ್ಕಸದಲ್ಲಿ ಹಣ ಇರಲಿಲ್ಲ. ಈ ಸ್ಥಿತಿಯಲ್ಲಿ ರಾಜ್ಯವನ್ನು ನಡೆಸುವ ಸಾಮಾರ್ಥ್ಯ ಇದ್ದದ್ದು ಕೇವಲ ಹೈದರ್ ಒಬ್ಬನಿಗೆ ಮಾತ್ರ. ಆದುದ್ದರಿಂದ ಅವನನ್ನು ಮೈಸೂರು ರಾಜ್ಯದ ಮಹಾಸೇನಾಧಿ ಪತಿಯಾಗಿ ನೇಮಿಸಿದರು. ಆಗಾ ನಂಜರಾಜಯ್ಯನ ಕಡೆಯಿಂದ 'ಖಂಡೆರಾಯ' ಎಂಬ ಒಬ್ಬ ವ್ಯಕ್ತಿಯನ್ನು ಹೈದರ್ ಇರಿಸಿಕೊಳ್ಳಬೇಕಾಯಿತು. ಈತ ಮರಾಠಿಯವರ ಗುಪ್ತಚಾರ ಈತನು ಸಮಯ ಸಾಧಿಸಿ. ಹೈದರ್‌ನನ್ನು ಸೆರೆ ಹಿಡಿದು ಮರಾಠಿಯವರಿಗೆ ಒಪ್ಪಿಸಲು ಮಾತುಕತೆ ನಡೆಸಿಕೊಂಡಿದ್ದನು. ಹೀಗಿರುವಾಗ ಒಮ್ಮೆ ಒಂದು

ದೊಡ್ಡ ಸೈನ್ಯದೊಂದಿಗೆ ಮರಾಠಿಯವರು ಶ್ರೀರಂಗಪಟ್ಟಣವನ್ನು ಮುತ್ತಿದರು. ಆಗ ಹೈದರ್‌ನನ್ನು ಸೆರೆಹಿಡಿಯಲು ಖಂಡೆರಾಯ ಸಿದ್ಧತೆ ನಡೆಸಿದ್ದ. ಇದೆನ್ನೆಲ್ಲ ತನ್ನ ಜನಗಳಿಂದ ತಿಳಿದುಕೊಂಡ ಹೈದರ್ ತನ್ನ ಆಪ್ತರ ಸಹಾಯದಿಂದ ರಾತ್ರಿ ಮನೆಯಿಂದ ಗುಪ್ತವಾಗಿ ಹೊರಟು ಕಾವೇರಿ ನದಿಯನ್ನು ಈಜಿಕೊಂಡು ದಾಟಿ ಬೆಂಗಳೂರಿನಲ್ಲಿದ್ದ ತನ್ನ ಸೈನ್ಯದ ಬಳಿಗೆ ತಲುಪಿದನು. ಅಲ್ಲಿಂದ ಸೈನ್ಯ ಸಮೇತ ಹಿಂತಿರುಗಿ ಬಂದು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿ ಕುಳಿತನು. ಈತನಿಗೆ ನಂಜರಾಜಯ್ಯ ಬಹಳ ಸಹಾಯ ಮಾಡಿದನು. ಸೈನ್ಯ ಮುತ್ತಿಕೊಂಡಾಗ ಮಾತುಕತೆಗಳು ಪ್ರಾರಂಭವಾದವು. ರಾಜರು ಕೋಟೆ ಬಾಗಿಲನ್ನು ತೆಗೆಸಿದರು. ಹೈದರ್ ಊರಿಗೆ ಪ್ರವೇಶ ಮಾಡಿ ರಾಜರು ಮತ್ತು ರಾಣಿಯವರಿಗೆ ಪ್ರಾಣಾವೂ ಸಲ್ಲಿಸಿದ್ದನು ಮತ್ತು ಮೈಸೂರು ರಾಜ್ಯದ ಸರ್ವಾಧಿಕಾರಿಯಾಗಿ ನೇಮಕ ಮಡಲ್ಪಟ್ಟನು. ಆಗ ಈತ ಮಾಡಿದ ಮೊದಲ ಕೆಲಸ ಖಂಡೆರಾಯನ ಬಂಧನ ಅವನನ್ನು ಏನು ಮಾಡಬೇಡ ಗಿಳಿಯಂತೆ ಸಾಕು ಎಂದು ಮಹಾರಾಣಿಯವರು ಹೈದರನಿಗೆ ಹೇಳಿದರು. ಅದೇ ರೀತಿ ಹೈದರ್ ಆಳ ಎತ್ತರದ ಒಂದು ಕಬ್ಬಿಣದ ಪಂಜರ ಮಾಡಿಸಿ ಅದರಲ್ಲಿ ಖಂಡೆರಾಯನನ್ನು ಬಂಧಿಸಿದನು. ಆತನಿಗೆ ಆಹಾರದ ರೂಪದಲ್ಲಿ ಅಕ್ಕಿ, ನೀರು ಮತ್ತು ಮೆಣಸಿಕಾಯಿಗಳನ್ನು ಗಿಳಿಗಳಿಗೆ ಕೊಡುವಂತೆ ಏರ್ಪಾಡು ಮಾಡಿದನು. ಹೀಗೆ ಸೆರೆಯಲ್ಲಿದ್ದು. ಖಂಡೆರಾಯ ಕೆಲವು ಕಾಲದ ನಂತರ ಸಾವೀಗಿಡಾದನು. ಈ ವಸ್ತುವಿನ ಆಧಾರದ ಮೇಲೆ ಈ ನಾಟಕವನ್ನು ರಚಿಸಿದ್ದಾರೆ. ಅದು ಆಕಾಶವಾಣಿ ಪ್ರಸಾರವಾಗಿದೆ.

9) **ಮಿರ್‌ಸಾದಕ್** :–ಈ ನಾಟಕವು ಶ್ರೀರಂಗಪಟ್ಟಣದಲ್ಲಿ ಆಳಿದ ಹೈದರ್ ಮತ್ತು ಸುಲ್ತಾನರ ಆಳ್ವಿಕೆಗೆ ಸಂಬಂಧಿಸಿದೆ. ಮತ್ತು ಪ್ರಮುಖವಾಗಿ ಟಿಪ್ಪುಸುಲ್ತಾನ್‌ನ ಆಳ್ವಿಕೆಯನ್ನು ಕುರಿತುದಾಗಿದೆ. ಇದು ಕೂಡ ಆಕಾಶವಾಣಿಯಲ್ಲಿ ಪ್ರಸಾರವಾಗಿದೆ. ಮಿರ್‌ಸಾದಕ್ ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಿ ಪ್ರಮುಖ ಅಧಿಕಾರಿ ಅಲ್ಲಿ ಅವರು ನಿರ್ಗತಿಕರಾದಾಗ ಶ್ರೀರಂಗಪಟ್ಟಣದಲ್ಲಿ ಹೈದರಾಲಿ ಅಧಿಕಾರಕ್ಕೆ ಬಂದ ಮೇಲೆ ಈ ಕುಟುಂಬಕ್ಕೆ ಸಹಾಯ ಮಾಡಿದ. ಹೈದರ್‌ನ ಕಾಲದಲ್ಲಿ ಸಮ್ಮನಿದ್ದ ಮಿರ್‌ಸಾದಕ್ ಹೈದರಾಬಾದಿನವರ ಪಿತೂರಿಗೆ ಒಳಗಾದನು. ಅವರು ಈತನಿಗೆ ಟಿಪುವಿನ ನಂತರ ಗುರ್‍ರಮ ಕೊಂಡೆಯ ಜಾಹಗೀರ್‌ನ್ನು ಕೊಡಿಸುವ ವಾಗ್ದಾನ ಮಾಡಿಕೊಟ್ಟರು. ಇದಕ್ಕೆ ಒಳಗಾದ ಮಿರ್‌ಸಾದಕ್ ಒಮ್ಮೆ ಹೈದಬಾದಿನಲ್ಲಿದ್ದ ತನ್ನ ಬಂಧುವಿಗೆ ಆತ ದುರುಪಯೋಗ ಮಾಡಿಕೊಂಡಿದ್ದ ಹಣವನ್ನು ತುಂಬಿಕೊಡಲು ಹಣ ಕೊಟ್ಟನು ಇದಕ್ಕಾಗಿ ಟಿಪು ಆತನನ್ನು ಗೃಹ ಬಂಧನದಲ್ಲಿ ಕೆಲವು ತಿಂಗಳೂ ಇರಿಸದ್ದನು. ಇದನ್ನೆ ಕಾರಣವಾಗಿ ಮಾಡಿಕೊಂಡು ಮಿರ್‌ಸಾದಕ್ ಟಿಪುವಿನ ಮೇಲೆ ಆತನ ರಾಜ್ಯವನ್ನು ನಾಶಮಾಡುವುದಾಗಿ ಪಣ ತೊಟ್ಟನು ಮತ್ತು ಇಂಗ್ಲೀಷರ ಜೊತೆ ಸಂಪರ್ಕ ಬಳಸಿದನು. ಇದು 4ನೇ ಮೈಸೂರು ಯುದ್ಧದಲ್ಲಿ ಉಲ್ಬಣವಾಗಿ ಮಿರ್‌ಸಾದಕ್‌ನ ಒಳ

ಸಂಚಿಗೆ ಸೇರಿಕೊಂಡಿದ್ದ ಆನೇಕ ವ್ಯಕ್ತಿಗಳು ಟಿಪ್ಪುವಿನ ರಕ್ಷಣಾ ವ್ಯವಸ್ಥೆಯನ್ನು ನಾಶ ಮಾಡಿದರು. ಅವನ ಆಪ್ತರನ್ನು ತಾವೇ ಗುಂಡಿಟ್ಟ ಕೊಂದರು. ಶ್ರೀರಂಗಪಟ್ಟಣದ ಪೂರ್ವದ್ವಾರದ ಬಾಗಿಲನ್ನು ಶತ್ರುಗಳಿಗಾಗಿ ತೆರೆದು ಬಿಟ್ಟರು. ಪಟ್ಟಣದ ವಾಯುವ್ಯ ದಿಕ್ಕಿನಿಂದ ಲಗ್ಗೆ ಹತ್ತಲು ಶತ್ರುಗಳಿಗೆ ಸಹಾಯ ಮಾಡಿದರು. ಎರಡು ಕಡೆಯ ಸೈನ್ಯದ ನಡುವೆ ಸಿಕ್ಕಿಕೊಂಡ ಟಿಪುವಿಗೆ ಹೊರಗಡೆ ಬರುವ ಬಾಗಿಲನ್ನು ಮುಚ್ಚಿ ಬಿಟ್ಟರು. ಈ ಪಿತೂರಿಗಳೆಲ್ಲ ಮಿರ್‌ಸಾದಕ್‌ನ ನಿರ್ದೇಶನದಲ್ಲಿ ನಡೆದವು. ಟಿಪ್ಪು ಬಿದ್ದ ಮೇಲೆ ಅ ಸುದ್ಧಿಯನ್ನು ಶತ್ರುಗಳಿಗೆ ಮೊದಲೆ ತಿಳಿಸಿ ತನ್ನ ಜಹಗೀರ್‌ನ್ನು ಬರಸಿಕೊಳ್ಳಲು ದಾವಿಸಿದ ಮಿರ್‌ಸಾದಕ್‌ನನ್ನು ಹಿಂಬಾಲಿಸಿ 'ಅಹಮದ್‌ಖಾನ್' ಎಂಬ ಇನ್ನೊಬ್ಬ ಮಂತ್ರಿ ಆತನನ್ನು ಹಿಡಿದು ಕೋಟೆಯ ಪೂರ್ವದ್ವಾರದ ಬಳಿ ಕತ್ತರಿಸಿ ಹಾಕಿದನು. ಈ ರೀತಿ ತನ್ನ ಸ್ವಾರ್ಥಕ್ಕಾಗಿ ಬಂದು ರಾಜ್ಯವನ್ನೇ ಬಲಿಕೊಟ್ಟ ವಿಶ್ವಾಸದ್ರೋಹಿ, ದೇಶದ್ರೋಹಿ, ಮಿರ್‌ಸಾದಕ್‌ನ ಕಥನವನ್ನು ಈ ನಾಟಕ ಒಳಗೊಂಡಿದೆ.

**10) ಎಚ್ಚರಗಣ್ಣು :-** ಈ ನಾಟಕವು ಒಡೆಯರ ಆಳ್ವಿಕೆಯ ಅತ್ಯಂತ ಪ್ರಸಿದ್ಧ ದೈವಭಕ್ತ ರಾಜರಾಗಿದ್ದ ರಾಜ ಒಡೆಯರ್‌ರವರ ಜೀವನಕ್ಕೆ ಸಂಬಂಧಿಸಿದ್ದು. ಇದು ಕೂಡ ಆಕಾಶವಾಣಿಯಲ್ಲಿ ಪ್ರಸಾರವಾಗಿದೆ. ರಾಜ ಒಡೆಯರ್ ವಿಜಯನಗರದ ಸಾಮಾಂತರಾಗಿದ್ದರು. ಆಗ ವಿಜಯ ನಗರದ ಮಾಂಡಲೀಕನಾಗಿ ತಿರುಮಲಾರಾಯ ಶ್ರೀರಂಗಪಟ್ಟಣದಲ್ಲಿದ್ದನ್ನು. ರಾಜ ಒಡೆಯರು ಮೈಸೂರಿನಲ್ಲಿದ್ದರು. ಇವರ ಸುತ್ತ ಅನೇಕ ಸಮಾಂತರಿದ್ದರು. ಆದರೆ ಅವರೆಲ್ಲ ರಾಜ ಒಡೆಯರು ಶಕ್ತರು, ಸಾಹಸಿಗಳು ಮತ್ತು ದೈವಭಕ್ತರು. ಅದ್ದುದರಿಂದ ಇವರನ್ನು ಸೋಲಿಸಿ ನಿರ್ನಾಮ ಮಾಡಬೇಕೆಂದು ಸುತ್ತಲ ಪಾಳೆಗಾರರು ಮಾಂಡಲೀಕರಿಗೆ ಚಾಡಿ ಹೇಳುತ್ತಿದ್ದರು. ಇದರ ಕಾರಣ ಮೂರು- ನಾಲ್ಕು ಸಲ ರಾಜ ಒಡೆಯರನ್ನು ಕೊಲ್ಲುವ ಒಳಸಂಚುಗಳು ನಡೆದವು. ಆದರೆ ದೈವಭಕ್ತರು ಸಾಹಸಿಯು ಆಗಿದ್ದ ರಾಜ ಒಡೆಯರ್ ಇವುಗಳಿಂದ ಪಾರಾದರು. ಒಮ್ಮೆ ಶತ್ರುಗಳು ಇವರಿಗೆ ತೀರ್ಥದಲ್ಲಿ ವಿಷವನ್ನು ಬೆರಸಿ ಕೊಡುವಂತೆ ಆರ್ಚಕನಿಗೆ ಲಂಚ ಕೊಟ್ಟಿದ್ದರು. ಆಗ ಅಂಗೈ ಮೇಲೆ ಸುರಿದ ತೀರ್ಥವನ್ನು ರಾಜ ಒಡೆಯರ್ ಕುಡಿದಾಗ ವಿಷದ ರೂಪದಲ್ಲಿದ್ದ ಗರಣಿ ಅವರ ಕೈಯಲ್ಲೆ ಉಳಿದು ಬರಿ ನೀರು ಮಾತ್ರ ಕುಡಿದರು. ಇನ್ನೊಮ್ಮೆ ಇವರನ್ನು ಭೇಟಿ ಮಾಡುವ ಸಲುವಾಗಿ ಕನ್ನಂಬಾಡಿಯ ಗೋಪಾಲರಾಜಯ್ಯನ ಒಬ್ಬ ಭಂಟ ಅರಮನೆಗೆ ಬಂದು ಭೇಟಿ ಮಾಡುವಾಗ ಇವರ ಮೇಲೆ ಬಿದ್ದು ಕೊಲ್ಲಲು ಯತ್ನಿಸಿದನು. ಆದರೆ ಆ ಸಮಯ ಕಂಬದ ಮರೆಯಲ್ಲಿ ಕಾದಿದ್ದ ಇವರ ತಮ್ಮನ ಮಗ ಹಠಾತ್ತನೆ. ಆ ಹಂತಕನ ಮೇಲೆ ಬಿದ್ದು ಅವನನ್ನು ನಿತ್ರಾಣಗೊಳಿಸಿ ಕೊಂದನು. ಮೂರನೇ ಸಲ ರಾಜ ಒಡೆಯರನ್ನು ಅವರ ಕಟ್ಟು ದ್ವೇಶಿ ವೀರರಾಜ ದ್ವಂದ್ವ ಯುದ್ಧ ದಲ್ಲಿ ಎದುರಿಸಿದನು. ಆದರೆ ವ್ಯಾಯಮ ಪಟುವು ಕತ್ತಿ ಯುದ್ಧದಲ್ಲಿ ಪಳಗಿದವರು ಆಗಿದ್ಧ ರಾಜ ಒಡೆಯರ್ ತೀರ ಕುಶಲತೆಯಿಂದ ಯುದ್ಧ ಮಾಡಿ ಆತನ ಮೂಗನ್ನು

ಚಮ್ಮಟಿಗೆಯಿಂದ ಬಡಿದರು. ಇದರಿಂದ ಗಾಯಗೊಂಡು ಕಿರುಚಾಡುತ್ತ ವೀರರಾಜ ತನ್ನ ಊರಿನ ಕಡೆಗೆ ಪಲಾಯನ ಮಾಡಿದ ಹೀಗೆ ರಾಜ ಒಡೆಯರು 3-4 ಬಾರಿ ಪ್ರಾಣಾಪಾಯದಿಂದ ಉಳಿದ ಕಥೆಯನ್ನು ಇಲ್ಲಿ ನಾಟಕ ರೂಪದಲ್ಲಿ ತಂದಿದ್ದಾರೆ. ಇದು ಆಕಾಶವಾಣಿಯಲ್ಲಿ ಪ್ರಸಾರವಾಗಿದೆ.

11) **ಸಾವಿಯಬ್ಬೆ:-** ಗಂಗರು ನೊಳಂಬರು. ಅಕ್ಕ-ಪಕ್ಕದ ಅರಸರು. ಗಂಗರು ತಲಾಕಾಡಿನಲ್ಲಿ ಮತ್ತು ನೊಳಂಬರು ಐಮಂಗಲದಲ್ಲಿ ರಾಜ್ಯವಾಳುತ್ತಿದ್ದರು. ಇವರು ವೈವಾಹಿಕ ಸಂಬಂಧಿಗಳೇ ಆದರೂ ರಾಜ್ಯಲೋಭದಿಂದ ಪದೇ- ಪದೇ ಸಂಘರ್ಷಕ್ಕೆ ಇಳಿಯುತ್ತಿದ್ದರು. ಅಂತಹ ಒಂದು ಪ್ರಸಂಗವನ್ನು ತೆಗೆದುಕೊಂಡು ಈ ನಾಟಕ ರಚಿಸಿದ್ದಾರೆ. ಇದು ಕೂಡ ಆಕಾಶವಾಣಿಯಲ್ಲಿ ಪ್ರಸಾರವಾಗಿದೆ. ಲೋಕ ವಿದ್ಯಾಧರ ಬಾಗಿಯೂರಿನಲ್ಲಿ ಗಂಗರ ಮಾಂಡಲೀಕನಾಗಿದ್ದನು. ಈತ ಗಂಗ ರಾಜಕುಲದ ರಾಚಮಲ್ಲರ ಸಂಬಂಧಿ. ಆಗನೊಳಂಬರ ಅರಸ ದಿಲೀಪನು ಆಳ್ವಿಕೆ ನಡೆಸುತ್ತಿದ್ದನು. ಸಾವಿಯಬ್ಬೆ ಗಂಗ ದಂಡನಾಯಕ ಕೇತಮರಸರ ಪುತ್ರಿ ಈಕೆಯನ್ನು ದಂಡನಾಯಕರು ತಮ್ಮೊಡನೆ ಯುದ್ಧರಂಗಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಹಾಗೂ ಯುದ್ಧ ವಿದ್ಯೆಯಲ್ಲಿ ಆಕೆಗೆ ಎಲ್ಲಾ ಬಗೆಯ ತರಬೇತಿಯನ್ನು ಕೊಟ್ಟಿದ್ದರು. ಈಕೆ ಮತ್ತು ಲೋಕ ವಿದ್ಯಾಧರ ಪರಸ್ಪರ ಪ್ರೇಮಿಸುತ್ತಿದ್ದರು. ಸಾವಿಯಬ್ಬೆ ಶಸ್ತ್ರ ವಿದ್ಯೆಯಲ್ಲಿ ಪರಿಣತಳಾಗಿದ್ದಳು. ಹಾಗೆಯೇ ತುಂಬ ಸುಂದರಿಯು ಆಗಿದ್ದಳು. ಇವರ ಪ್ರೇಮವನ್ನು ಅರಿತಿದ್ದ ಗಂಗ ಪೆರ್ಮಾಡಿಗಳು ಅವರಿಬ್ಬರ ವಿವಾಹವನ್ನು ನೆರವೇರಿಸಬೇಕೆಂದು ತಮ್ಮ ಬಂಧು ಮಾರಸಿಂಹರಿಗೆ ಸೂಚನೆ ಕೊಟ್ಟಿದ್ದರು. ಅಷ್ಟರಲ್ಲಿ ನೊಳಂಬರು ಒಂದು ದೊಡ್ಡ ಸೈನ್ಯದೊಂದಿಗೆ ಬಾಗಿಯೂರಿನ ಮೇಲೆ ನುಗ್ಗಿ ಬಂದರು ದೊಡ್ಡ ಸೈನ್ಯವಿದ್ದ ಇವರನ್ನು ಲೋಕವಿದ್ಯಾಧರ ತನ್ನಲ್ಲಿದ್ದ ಅಲ್ಪ ಸೇನೆಯೊಂದಿಗೆ ಎದುರಿಸಿದನು. ಆದರೆ ಬಹುಸಂಖ್ಯೆಯಲ್ಲಿದ್ಧ ನೊಳಂಬರನ್ನು ತಡೆಯಲು ಆಗಲಿಲ್ಲ. ತುರ್ತಾಗಿ ಹೆಚ್ಚು ಸೈನ್ಯವನ್ನು ಕಳುಹಿಸಬೇಕೆಂದು ತಲಾಕಾಡಿಗೆ ದೂತರನ್ನು ಕಳುಹಿಸಿದನು. ಅಲ್ಲಿಂದ ಸಹಾಯ ಸೈನ್ಯ ಬರುವುದು ತಡವಾಯಿತು. ಆದರೂ ತನ್ನಲ್ಲಿದ್ಧ ಅಲ್ಪ ಸೇನೆಯೊಡನೆ ನೊಳಂಬರನ್ನು ಎದುರಿಸುತ್ತಾ ಗಾಯಗೊಂಡನು, ನೊಳಂಬ ಸೇನೆಯ ಮಹಾಸೇನಾಧಿಪತಿ ದಾಮಣ್ಣನಿಗೆ ಅವನ ರಾಜನಾಗಿದ್ಧ ದಿಲೀಪರಸರು ಅವರನ್ನು ಉಪಾಯಾಂತರವಾಗಿ ಲೋಕವಿದ್ಯಾಧರ ಮತ್ತು ಸಾವಿಯಬ್ಬೆಯನ್ನು ಯಾವ ಅಪಾಯವಿಲ್ಲದಂತೆ ಸೆರೆಹಿಡಿದು ತರಬೇಕೆಂದು ಹೇಳಿಕಳುಹಿಸಿದ್ದರು. ಈ ಉದ್ದೇಶಕೊಸ್ಕರ ನೊಳಂಬರು ಅಪಾರ ಸಂಖ್ಯೆಯಲ್ಲಿ ಲೋಕವಿಧ್ಯಾಧರನ ಮೇಲೆ ಕವಿದು ಬಿದ್ದರು. ಆದರೆ ಯುದ್ಧ ಮಾಡುತ್ತ ಸೈನಿಕರ ಅವಸರದಿಂದ ಲೋಕ ಆನೇಕ ಕಡೆ ಪೆಟ್ಟು ತಿಂದನು. ಆಗ ಪುರುಷ ವೇಷದಲ್ಲಿದ್ದ ಸಾವಿಯಬ್ಬೆ ಅಲ್ಲಿಗೆ ಧಾವಿಸಿ ಬಂದು ತಾನೂ ಯುದ್ಧದಲ್ಲ ತೊಡಗಿದಳು. ನೂರಾರು ಜನನೊಳಂಬ ಸೈನಿಕರು ಆಕೆಯ ಮೇಲೆ ಬಿದ್ದರು. ಅಸಮಯದಲ್ಲಿ ಸೇನಾಧಿಪತಿ ದಾಮಣ್ಣನಾಯಕ ಬೇರೆ ಕಡೆಗೆ ಹೋಗಿದ್ದನು. ಆತನು ಇಲ್ಲದ ಸಮಯದಲ್ಲಿ

ಇಬರಿಬ್ಬರೇ ಶತ್ರುಗಳೊಡನೆ ಹೋರಾಡುತ್ತ ಆನೇಕ ಕಡೆ ಏಟು ತಿಂದು, ಲೋಕವಿಧ್ಯಾಧರ ಮತ್ತು ಸಾವಿಯಬ್ಬೆ ಸಾವಿಗೀಡಾದರು ದಾಮಣ್ಣ ಹಿಂತಿರುಗಿ ಬರುವಷ್ಟರಲ್ಲಿ ಈ ಆನಾಹುತ ನಡೆದು ಹೊಗಿತ್ತು ಈ ರೀತಿ ಪರಸ್ಪರ ಸಂಬಂಧಿಗಳಾದ ಈ ಎರಡು ಕುಲಗಳು ತಮ್ಮ ಪ್ರತಿಷ್ಠೆಯನ್ನು ಮೆರೆಸಲು ಈ ಎರಡು ತರುಣ ಜೀವಗಳನ್ನು ಬಲಿಕೊಟ್ಟರು. ಸಾವಿಯಬ್ಬೆ ತನ್ನ ಪ್ರೇಮಿಯ ಸಹಾಯಕ್ಕೆ ನಿಂತು ಹೋರಾಡಿ ಅವನೊಂದಿಗೆ ತಾನು ಕೂಡ ವೀರ ಮರಣವನ್ನು ಪಡೆದಳು. ಈ ನಾಟಕ ಇವರ ಕಥೆಯನ್ನು ಚಿತ್ತರಿಸುತ್ತದೆ.

12) **ಅಪೂರ್ವ ಆತ್ಮಾ ಹುತಿ:-** ಈ ನಾಟಕವು ಕೂಡ ಆಕಾಶವಾಣಿಯಲ್ಲಿ ಪ್ರಸಾರವಾಗಿದೆ. ಇದು ಹೊಯ್ಸಳ. ಚಕ್ರವರ್ತಿ ವೀರ ಬಿಲ್ಲಾಳನ ಕಾಲಕ್ಕೆ ಸಂಬಂಧಪಟ್ಟ ನಾಟಕ. ವೀರ ಬಲ್ಲಾಳ ಹೊಯ್ಸಳರಲ್ಲಿ ಪ್ರಸಿದ್ಧನಾದ ಅರಸ. ಆತನ ಆಳ್ವಿಕೆಯಲ್ಲಿ ಆತನ ಸಮಾಂತನಾಗಿದ್ದ ಹಾದಿಯಕೆರೆಯ ಪ್ರಭುನಾಗಗೌಡನ ಆರನೆಯ ಮಗ ಲಕ್ಷ್ಮೀಧರನನ್ನು ಅರಸ ತನ್ನ ಅರಮನೆಯಲ್ಲಿ ಇರಿಸಿಕೊಂಡಿದ್ದನು. ಆತನನ್ನು ತನ್ನ ಮಗನಂತೆಯೇ ಪ್ರೀತಿಸುತ್ತ ಎಲ್ಲಾ ಬಗೆಯ ಅಧಿಕಾರಗಳನ್ನು ಆತನಿಗೆ ಕೊಟ್ಟಿದ್ದನು. ಇವನನ್ನು ಇತಿಹಾಸ ಕುವರ ಲಕ್ಷ್ಮ ಎಂದು ಕರೆಯುತ್ತದೆ. ಬಹಳ ಸಾಹಸಿ ಹಾಗೂ ರಾಜಭಕ್ತ ಇತನಿಗೆ ಒಂದು ಸಾವಿರ ಜನ ಅನುಯಾಯಿಗಳು ಇದ್ದರು. ಅಕಾಲದಲ್ಲಿದ್ದ ಜೈನ ಸಮಾಜದ ಪದ್ಧತಿಯಂತೆ ಇವರೆಲ್ಲ ಅರಸನಿಗೆ ಗರುಡರಾದರು ಹಾಗೂ ಅತಿ ನಿಷ್ಠೆಯಿಂದ ಅರಸನ ಸೇವೆಯನ್ನು ಮಾಡಿ ಆನೇಕ ಯುದ್ಧಗಳಲ್ಲಿ ಹೋರಾಡಿ ಹೊಯ್ಸಳ ಸಾಮ್ರಾಜ್ಯದ ಕೀರ್ತಿ ಮತ್ತು ಪ್ರತಿಷ್ಠೆಗಳಿಗೆ ಕಾರಣರಾದರು. ಈತನ ಪತ್ನಿ ಸುಗ್ಗಲಾದೇವಿ. ಇಬರಿಬ್ಬರದ್ದು ಪ್ರೇಮ ವಿವಾಹ. ಆಕೆ ನೆರೆಯ ನಾಡಿನ ಕಾರ್ಯಕರ್ತನ ಮಗಳು. ಹಾಗೂ ಅತಿಶಯ ಸೌಂದರ್ಯವತಿ ಒಮ್ಮೆ ಲಕ್ಷ್ಮೀಧರ ಅವಳ ನಾಡಿಗೆ ಕಾರ್ಯಾಂತರವಾಗಿ ಹೋಗಿದ್ದಾಗ ಇಬ್ಬರು ಪರಸ್ಪರ ಮೋಹಿಸಿ ಹಿರಿಯರ ಅಪ್ಪಣೆ ಪಡೆದು ಮದುವೆಯಾದರು. ಸುಗ್ಗಲಾದೇವಿಯು ತನ್ನ ಪತಿಯ ಪ್ರತಿಜ್ಞೆಯ ಪ್ರಕಾರ ತಾನು ಆತನ ಪ್ರತಿಜ್ಞೆಯನ್ನು ಅನುಕರಿಸಿ ತನ್ನ ಅನುಯಾಯಿಗಳ ಸಹಿತ ಗರುಡರಾಗುವ ದೀಕ್ಷೆಯನ್ನು ವಹಿಸಿದಳು. ಮತ್ತು ಅವರೊಂದಿಗೆ ಅಲ್ಲಿಂದ ಮುಂದೆ ನಡೆದ ಎಲ್ಲಾ ಯುದ್ಧಗಳಲ್ಲೂ ಭಾಗವಹಿಸಿ ಹೋರಾಟ ಮಾಡಿದಳು ಹೀಗಿರುವಾಗ ಒಮ್ಮೆ ರಾಜ ತೀವ್ರವಾದ ಬೇನೆಗೆ ತುತ್ತಾಗಿ ಸಾವಿಗೀಡಾದನು. ಆಗ ಆತನ ವೀರ ಗರುಡನಾಗಿದ್ಧ ಲಕ್ಷ್ಮೀಧರ ಮತ್ತು ಅವನ ಸಾವಿರ ಜನ ಅನುಯಾಯಿಗಳು ಗರುಡಗಂಬಗಳನ್ನು ಏರಿ ಆತ್ಮಹತ್ಯೆ ಮಾಡಿಕೊಂಡರು. ಪತಿಯ ಈ ಪ್ರತಿಜ್ಞಾ ಮರಣದಿಂದ ಅತೀವವಾಗಿ ದುಃಖಿತಳಾದ ಸುಗ್ಗಲಾದೇವಿ ತಾನು ಮಾಡಿದ್ದ ಪ್ರತಿಜ್ಞೆಯ ಅನುಸಾರ ತನ್ನ ಒಂದು ಸಾವಿರ ಸೇವಕಿಯರ ಜೊತೆಗೂಡಿ ಪ್ರಾಣಾರ್ಪಣೆ ಮಾಡಿದಳು, ಇದು ಕರ್ನಾಟಕದ ಇತಿಹಾಸದಲ್ಲಿ ಅಪೂರ್ವವಾದ ಒಂದು ಸಂಗತಿಯಾಗಿದೆ. ಹಾಗೂ ಭಾರತದ ಇತಿಹಾಸದಲ್ಲಿ ಯಾವ

ನಾಡಿನಲ್ಲೂ ಕೂಡ ಕಂಡು ಬರದ, ಕೇಳ ಬರದ ಸಂಗತಿಯಾಗಿದೆ. ಈ ಆಧಾರದ ಮೇಲೆ ಈ ನಾಟಕಗಳನ್ನು ರಚಿಸಿದ್ದಾರೆ.

13) **ಶಾಂತಲಾ** : ಹೊಯ್ಸಳ ರಾಜ ವಿಷ್ಣುವರ್ಧನನ ಮೊದಲನೆ ಪತ್ನಿ ಹಿರಿಯ ಶಾಂತಲಾದೇವಿ. ಈಕೆ ಬೆಳ್ಳಿಗಾವೆಯ ಹೆಗ್ಗಡೆ ಮಾರಸಿಂಗಮಯ್ಯನ ಮಗಳು. ಹಾಗೂ ಶೈವ ಸಂಪ್ರಾಧಾಯಕ್ಕೆ ಸೇರಿದ್ದವಳು. ಈಕೆ ನಾಟ್ಯದಲ್ಲಿ ಪರಿಣಿತಿ ಪಡೆದು ಆ ಕಾಲದಲ್ಲಿ 'ನಾಟ್ಯರಾಣಿ' ಎಂಬ ಬಿರುದಿಗೆ ಪಾತ್ರಾಳಾಗಿದ್ದಳು. ಈಕೆ ಆ ಕಾಲದಲ್ಲಿ ಪ್ರಸಿದ್ದ ಜ್ಞಾನಿಗಳಾಗಿದ್ದ ಶುಭಚಂದ್ರ. ಸಿದ್ದಾಂತ ದೇವ ಎಂಬ ಜೈನ ಮುನಿಗಳ ಶಿಷ್ಯ. ಆಕಾಲದಲ್ಲಿ ರಾಜ ಕಾರ್ಯನಿಮಿತ್ತವಾಗಿ ಬಳ್ಳಿಗಾವೆಗೆ ಬಂದಿದ್ದ ವಿಷ್ಣುವರ್ಧನನಿಗೆ ಇವಳ ನಾಟ್ಯವನ್ನು ನೋಡುವ ಅವಕಾಶ ದೊರಕಿತ್ತು. ಹೀಗೆ ಪರಸ್ಥರ ಆನೇಕ ಸಲ ಭೇಟಿಯಾದ ಇವರು ಪರಸ್ಥರ ಒಪ್ಪಿಕೊಂಡು ಮದುವೆಯಾದರು. ಮುಂದೆ ಆನೇಕ ವರ್ಷಗಳ ಕಾಲ ಈಕೆ ಮಹಾರಾಜ ವಿಷ್ಣುವರ್ಧನನ ಮೈ ಮನಸ್ಸುಗಳನ್ನು ಆಕ್ರಮಿಸಿಕೊಂಡಳು. ಆಕಾಲದ ಪದ್ಧತಿಯ ಪ್ರಕಾರ ರಾಜ ಇವಳ ಹೊರತಾಗಿ ಇನ್ನು ನಾಲ್ಕು ಜನ ಪತ್ನಿಯರನ್ನು ಮದುವೆಯಾಗಿದ್ದನು. ಇವರಿಗೆ ಎಂದರೆ ಶಾಂತಲೆಗೆ ವಿಷ್ಣುವರ್ಧನನಲ್ಲಿ ಒಬ್ಬ ಮಗಳು ಮತ್ತು ಒಬ್ಬ ಮಗನು ಹುಟ್ಟಿದರು. ರಾಜ ಸಂಗೀತ ಸಾಹಿತ್ಯ. ನರ್ತನ, ಮುಂತಾದ ಕಲೆಗಳನ್ನು ಸ್ವಯಂ ಅರಿತಿದ್ದನು. ಈ ರೀತಿ ಇವರದ್ದು ಅಪರೂಪದ ದಾಂಪತ್ಯ. ವೈರಿಗಳ ಜೊತೆಯಲ್ಲಿ ವಿಷ್ಣುವರ್ಧನ ಆಗಾಗ ಯುದ್ಧಗಳಿಗೆ ತೆರಳುತ್ತಿದ್ದನು. ಇಂತಹ ಒಂದು ಯುದ್ಧದಲ್ಲಿ ಇವರ ಒಬ್ಬನೇ ಮಗ ಹೋರಾಡಿ ಅಸುನಿಗಿದನು. ಈ ದುಃಖ ಇಬ್ಬರನ್ನು ಕಾಡುತ್ತಿತ್ತು. ಒಮ್ಮೆ ಶಾಂತಲಾ ದೇವಿಯು ಒಂದು ದೋಣಿಯ ಮೇಲೆ ಏರ್ಪಡಿಸಿದ್ಧ ವೇದಿಕೆಯನ್ನು ಹತ್ತಿ ಅದರ ಮೇಲೆ ನಾಟ್ಯವಾಡುತ್ತಿದ್ದಳು. ಈ ದೋಣಿಗೆ ಚಲಿಸುವ ಉದ್ಧನೆಯ ಹಗ್ಗಗಳನ್ನು ಕಟ್ಟಿದ್ದರು. ಅಂತಹ ಸಮಯ ಸಾಧಿಸಿ. ಶಿವಗಂಗೆಗೆ ಬಂದಿದ್ಧ ಚೋಳರ ಕಡೆಯ ಗುಪ್ತಚಾರರು ನದಿಯಲ್ಲಿ ಮುಳುಗಿ ಈಕೆ ನಾಟ್ಯವಾಡುತ್ತಿದ್ದ ದೋಣಿಯನ್ನು ಬಂಧಿಸಿದ್ದ ಹಗ್ಗಗಳನ್ನು ಕೊಯ್ದುಬಿಟ್ಟರು. ಇದರ ಪರಿಣಾಮವಾಗಿ ದೋಣಿ ಮಗುಚಿಕೊಂಡು. ಶಾಂತಲಾದೇವಿ ನೀರಿನಲ್ಲಿ ಬಿದ್ದಳು. ಅವಳನ್ನು ರಕ್ಷಿಸಲು ಮಾಡಿದ ಪ್ರಯತ್ನಗಳು ಸಫಲವಾಗದೇ ಆಕೆ ಪ್ರಾಣ ಬಿಟ್ಟಳು. ಈ ಕಥೆಯನ್ನು ಆಧರಿಸಿ ಈ ನಾಟಕವನ್ನು ರಚಿಸಿದ್ದಾರೆ. ಇದು ಕೂಡ ಆಕಾಶವಾಣಿಯಲ್ಲಿ ಪ್ರಸಾರವಾಗಿದೆ.

14) **ಮಚ್ಚೆ ಮುಂಡಾಸು** :- ಇದು ಒಂದು ಪತ್ತೆದಾರಿ ನಾಟಕ, ಇಂಗ್ಲೀಷ್ ಭಾಷೆಯ ಒಂದು ಪ್ರಖ್ಯಾಧ ಪತ್ತೆದಾರಿ ಕಥೆಯನ್ನು ಆಧರಿಸಿ ಈ ನಾಟಕವನ್ನು ರಚಿಸಿದ್ದಾರೆ. ಇದು ಕೂಡ ಆಕಾಶವಾವಣಿಯಲ್ಲಿ ಪ್ರಸಾರವಾಗಿದೆ. ಹಾಗೂ ಆಕಾಶವಾಣಿಯಲ್ಲಿ ಪ್ರಸಾರವಾದ ಮೊಟ್ಟ ಮೊದಲನ ಪತ್ತೆದಾರಿ ನಾಟಕವಾಗಿದೆ. ಬ್ರಿಟಿಷರು ಪೂರ್ವದೇಶಗಳಲ್ಲಿ ವಸಹತುಗಳನ್ನು ಸ್ಥಾಪಿಸಿ ಕೊಂಡಿದ್ದ ಹಿನ್ನಲೆಯನ್ನು ಈ ನಾಟಕ ಪಡೆದಿದೆ. ಅಂತಹ ಕಾಲದಲ್ಲಿ ಪೂರ್ವದೇಶಗಳಲ್ಲಿ ಬ್ರಿಟಿಷ್

ಸೈನ್ಯದಲ್ಲಿ ಸೇವೆ ಸಲ್ಲಿಸಿದ್ಧ ಒಬ್ಬ ಅಧಿಕಾರಿ ತನಗೆ ಮೊದಲು ಆಪ್ತರಾಗಿದದ್ದು ಮೋಸ ಮಾಡಿದ ಮತ್ತು ಈಗ ಇಂಗ್ಲೆಂಡ್‌ನಲ್ಲಿ ನೆಲೆಸಿರುವ ತನ್ನ ಹಳೆಯ ಸ್ನೇಹಿತನ ಮೇಲೆ ಸೇಡನ್ನು ತೀರಿಸಿಕೊಳ್ಳುವ ವಸ್ತು ಈ ನಾಟಕಕ್ಕೆ ಸಂಬಂಧಿಸಿದೆ. ಆತ ಪೂರ್ವ ದೇಶದಿಂದ ಇಂಗ್ಲೆಂಡಿಗೆ ಹೋಗುವಾಗ ಒಂದು ಸರ್ಪವನ್ನು ತನ್ನ ಜೊತೆ ತೆಗೆದುಕೊಂಡು ಹೋಗಿರುತ್ತಾನೆ. ಇದರ ಮೈ ತುಂಬ ಮಚ್ಚೆಗಳು ಇರುತ್ತವೆ. ಹಾಗೂ ಇದು ಭಯಂಕರವಾದ ವಿಷದ ಹಾವು. ಈ ಹಾವಿಗೆ ಕೆಲವು ಶಬ್ಧಗಳನ್ನು ಮಾಡಿದಾಗ ಅದು ನಿರ್ದೇಶನದ ವ್ಯಕ್ತಿಯತ್ತ ಬಂದು ಅವನತ್ತ ಹರಿದು ಬಂದು ಅವನ ಹಣೆಗೆ ಪೇಟದಂತೆ ಸುತ್ತಿಕೊಳ್ಳುತ್ತದೆ. ಹಾಗೂ ಅವನನ್ನು ಕಚ್ಚುತ್ತದೆ. ಈ ರೀತಿಯ ಅಭ್ಯಾಸವನ್ನು ಅವ್ಯಕ್ತಿ ಈ ಹಾವಿಗೆ ಮಾಡಿಸಿರುತ್ತಾನೆ. ಈಗ ತನ್ನ ದ್ರೋಹಿಯಾದ ಸ್ನೇಹಿತನನ್ನು ಕೊಲ್ಲುವಾಗ ತಾನು ಆ ಸ್ನೇಹಿತನ ಕೋಣೆಯಲ್ಲಿ ಇದ್ದುಕೊಂಡು ಹಾವನ್ನು ಪಕ್ಕದ ಕೋಣೆಯಲ್ಲಿ ಬಿಟ್ಟಿರುತ್ತಾನೆ. ಮತ್ತು ನಿರ್ದಿಷ್ಟ ಸಮಯದಲ್ಲಿ ಶಬ್ಧಗಳ ಮೂಲಕ ಅದಕ್ಕೆ ಸೂಚನೆ ಕೊಡುತ್ತಾನೆ. ಆಗ ಆ ಹಾವು ಛಾವಣಿಯ ಮೇಲಿಂದ ಇಳಿದು ಆ ವ್ಯಕ್ತಿಯ ಹಣೆಗೆ ಸುತ್ತಿಕೊಳ್ಳುತ್ತದೆ. ಮತ್ತು ಅವನನ್ನು ಕಚ್ಚುತ್ತದೆ. ಇದರಿಂದ ಆತ ಮರಣಕ್ಕೆ ಈಡಾಗುತ್ತಾನೆ. ನಂತರ ಅದು ತನ್ನ ಸ್ವಸ್ಥಾನಕ್ಕೆ ಹಿಂತಿರುತ್ತದೆ. ಈ ಕೊಲೆಯನ್ನು ನಿಕ್ಷಾತನಾದ ಒಬ್ಬ ಪತ್ತೆದಾರ ಭೇದಿಸುತ್ತಾನೆ. ಇದನ್ನು ಆಧಾರವಾಗಿಟ್ಟುಕೊಂಡು ಈ ನಾಟಕವನ್ನು ರಚಿಸಿದ್ದಾರೆ. ಇದು ಕೂಡ ಆಕಾಶವಾಣಿಯಲ್ಲಿ ಪ್ರಸಾರವಾಗಿದೆ.

15) **ದೇವಾನಂದರ ದೀಪ ಸ್ಥಂಭಗಳು** :- ಇದು ಕೂಡ ಒಂದು ಅನುವಾದಿತ ಏಕಾಂತ ನಾಟಕ. ಇದನ್ನು ಇಂಗ್ಲೀಷ್‌ನಿಂದ ಎತ್ತಿಕೊಂಡಿದ್ದಾರೆ. ದೇವಾನಂದರು ಒಬ್ಬರು ಸೌಮ್ಯ ಸ್ವಭಾವದ ಹಾಗೂ ಧಾರ್ಮಿಕ ಸಂತರ ದೃಷ್ಠಿಯನ್ನು ಪಡೆದುಕೊಂಡಿದ್ದ ವ್ಯಕ್ತಿ, ಎಲ್ಲರನ್ನೂ ಪ್ರೀತಿ ವಿಶ್ವಾಸಗಳಿಂದ ನೋಡಿ ಇಟ್ಟದ್ದಾವರು. ಅವರು ಯಾವಾಗಲೂ ತಮ್ಮ ಮನೆಯ ಬಾಗಿಲನ್ನು ಮುಚ್ಚುತ್ತಿರಲಿಲ್ಲ. ಎಲ್ಲರಿಗೂ ಯಾವಾಗ ಬೇಕಾದರು ಅಲ್ಲಿಗೆ ಬರುವ ಅವಕಾಶವಿತ್ತು. ಆಗಾ ಒಬ್ಬ ಅಪರಾಧಿ ಸೆರೆಮನೆಯಿಂದ ತಪ್ಪಿಸಿಕೊಂಡು ಓಡಿ ಹೋಗುತ್ತ ಇವರ ಮನೆಯ ಬಾಗಿಲನ್ನು ನೋಡಿ ಒಳಗಡೆಗೆ ಪ್ರವೇಶ ಮಾಡುತ್ತಾನೆ. ಇವರಿಗೆ ಆ ಸಮಾಜದಲ್ಲಿ ಬಹಳ ಗೌರವ ಹಾಗೂ ಮಾರ್ಯದೆಗಳು ಇರುತ್ತದೆ. ಆ ಅಪರಾಧಿಯನ್ನು ಹಿಂಬಾಲಿಸಿ ಪೋಲೀಸರು ಬರುತ್ತಾರೆ.ಮತ್ತು ಅವನನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಬೇಕೆಂದು ಪ್ರಯತ್ನಿಸುತ್ತಾರೆ. ಆಗ ಇವರು ಪೋಲೀಸರಿಗೆ. ಆತ ನಮ್ಮ ಅತಿಥಿ. ನಾನೇ ಆತನನ್ನು ಕರೆದಿದ್ದೆ ಎಂದು ಹೇಳಿ ಕಳುಹಿಸಿ ಬಿಡುತ್ತಾರೆ. ಆತನಿಗೆ ಹೊಟ್ಟೆ ತುಂಬ ಊಟ ಮಾಡಿಸುತ್ತಾರೆ. ಮತ್ತು ವಿಶ್ರಮಿಸಿಕೊಳ್ಳಲು ಅವಕಾಶ ಮಾಡಿ ಕೊಡುತ್ತಾರೆ. ಹೀಗೆ ಎಲ್ಲರೂ ಮಲಗಿದ ಮೇಲೆ ಆತ ರಾತ್ರಿಯ ನಡು ಕತ್ತಲಲ್ಲಿ ಇವರ ಮನೆಯಲ್ಲಿದ್ದ ಬೆಲೆ ಬಾಳುವ ದೀಪದ ಕಂಬಗಳನ್ನು ಕದ್ದು ಅಲ್ಲಿಂದ ಪರಾರಿಯಾಗುತ್ತಾನೆ. ಬೆಳಗ್ಗೆ ದೀಪದ ಕಂಬಗಳು

ಮತ್ತು ಆತ ಇಲ್ಲದೇ ಇರುವುದನ್ನು ನೋಡಿ ದೇವಾನಂದರ ತಂಗಿ ಇವರಿಗೆ ತಿಳಿಸುತ್ತಾಳೆ. ಆಗಾ ಇವರು ಮಂದಹಾಸದಿಂದ ಅವುಗಳನ್ನು ನಾನೇ ಆತನಿಗೆ ಕೊಟ್ಟಿದ್ದೆ ಎಂದು ತಿಳಿಸುತ್ತಾರೆ. ಸ್ವಲ್ಪ ಸಮಯದ ನಂತರ ಅವ್ಯಕ್ತಿ ದೀಪದ ಕಂಬಗಳನ್ನು ಪೇಟೆಯಲ್ಲಿ ಮಾರಲು ಪ್ರಯತ್ನಿಸಿ ಸಿಕ್ಕಿ ಬೀಳುತ್ತಾನೆ. ಅವನನ್ನು ಹಿಡಿದು ಪೋಲೀಸರು ಇವರ ಬಳಿಗೆ ತರುತ್ತಾರೆ. ಆಗ ನಾನೇ ಆತನಿಗೆ ಇವುಗಳನ್ನು ಉಡುಗೊರೆಯಾಗಿ ಕೊಟ್ಟಿದ್ದೆ. ಅವನನ್ನು ಬಿಟ್ಟುಬಿಡಿ ಎಂದು ಹೇಳಿ ಬಿಡಿಸುತ್ತಾರೆ. ಪೋಲೀಸರು ತೆರಳಿದ ಮೇಲೆ ಅವ್ಯಕ್ತಿಗೆ ಬುದ್ಧಿ ಹೇಳಿ ಅ ದೀಪದ ಕಂಬಗಳನ್ನು ಆತನಿಗೆ ಕೊಟ್ಟು ಕಳುಹಿಸುತ್ತಾರೆ. ಇದು ಈ ನಾಟಕದ ವಸ್ತು.

16)**ಕಿತಾಪತಿ** :ಒಬ್ಬ ವಿದ್ಯಾರ್ಥಿನಿಯ ಜೀವನದ ಒಂದು ಪ್ರಸಂಗವನ್ನು ಎತ್ತಿಕೊಂಡು ಈ ನಾಟಕವನ್ನು ರಚಿಸಿದ್ದಾರೆ. ಇದು ಇವರ ಸ್ವತಂತ್ರ ನಾಟಕ. ಊರಿಗೆ ಹೊಸದಾಗಿ ವರ್ಗವಾಗಿ ಬಂದ ಒಬ್ಬ ಅಧಿಕಾರಿಯ ಮಗಳು ಅ ಹುಡುಗಿ. ಊರಿನ ಸ್ಥಿತಿಗತಿಗಳನ್ನು ಸರಿಯಾಗಿ ಇನ್ನು ತಿಳಿಯದ ಮುಗ್ದೆ. ಆಕೆ. ಮನೆ ಪಾಠಕ್ಕೆ ಸೇರಿಕೊಂಡಾಗ ಒಂದು ಕ್ಲಿಷ್ಟಕರ ಸಮಸ್ಯೆಗೆ ಸಿಕ್ಕಿ ಬೀಳುತ್ತಾಳೆ. ಆಗ ಅನಿವಾರ್ಯವಾಗಿ ತನ್ನ ಕಷ್ಟವನ್ನು ಸ್ನೇಹಿತೆಯರಿಗೆ ಹೇಳಿ ಇದಕ್ಕೆ ತಕ್ಕ ಪರಿಹಾರವನ್ನು ಹುಡುಕಿಕೊಡುವಂತೆ ತಮ್ಮ ಜೊತೆಯ ವಿದ್ಯಾರ್ಥಿಗಳನ್ನು ಕೇಳಿಕೊಳ್ಳುತ್ತಾರೆ. ಅ ವಿದ್ಯಾರ್ಥಿಗಳು ತಮ್ಮಲ್ಲೇ ಮಾತಾನಾಡಿಕೊಂಡು ಒಂದು ವ್ಯೂಹ ರಚಿಸುತ್ತಾರೆ. ಹಾಗೂ ತಾವು ಮಾಡಿರತಕ್ಕ ಏರ್ಪಾಡುಗಳನ್ನು ಮುಂಚಿತವಾಗಿ ತಮ್ಮ ಸಹವಿದ್ಯಾರ್ಥಿನಿಯರಿಗೆ ಮತ್ತು ಊರಿನ ಗಣ್ಯರಿಗೆ ತಿಳಿಸಿರುತ್ತಾರೆ. ಈ ಏರ್ಪಾಡಿನಿಂದ ಸಮಸ್ಯೆಗೆ ಸಿಲುಕಿದ್ದ ಅ ಹೊಸ ವಿದ್ಯಾರ್ಥಿನಿ ಬಿಡುಗಡೆಯಾಗುತ್ತಾಳೆ. ಇದು ನಾಟಕದ ವಸ್ತು.

19) **ಆವಾಂತರ** ;- ಇದು ಕೂಡ ಇಂಗ್ಲೀಷ್‌ನ ನಾಟಕದ ಅನುವಾದ, ದೇಶದಲ್ಲಿ ತುರ್ತು ಪರಿಸ್ಥಿತಿ ಇದ್ದಾಗಿನ ಸ್ಥಿತಿಗತಿಗಳನ್ನು ಹಿನ್ನಲೆಯಾಗಿ ಪಡೆದಿದೆ. ಬೇರೆ ಊರಿನಿಂದ ವರ್ಗವಾಗಿ ಬಂದ ಒಬ್ಬ ಅಧಿಕಾರಿ ತಾನು ತನ್ನ ಜೊತೆಯಲ್ಲಿ ತಂದಿದ್ದ ಶಿಫಾರಸು ಪತ್ರಗಳನ್ನು ಓದಿ ತನ್ನ ಪರಿಚಯದ ಹೊಸ ಜನಗಳಿಗೆ ಅವುಗಳ ವಿಷಯವನ್ನು ತಿಳಿಸುವ ಪ್ರಯತ್ನ ಮಾಡುತ್ತಾನೆ. ಆದರೆ ಇಲ್ಲಿರುವ ಜನ ಅವುಗಳನ್ನು ತಪ್ಪಾಗಿ ಗ್ರಹಿಸಿ ಅನೇಕ ಬಗೆಯ ಉತ್ಸಾಹವನ್ನು ತೋರುತ್ತಾರೆ. ಇದು ವಿಪರೀತಕ್ಕೆ ಹೋಗಿ ಆತ ಊಹಿಸದ್ದೇ ಬೇರೆ. ಇಲ್ಲಿ ಆಗುತ್ತಿರುವುದೇ ಬೇರೆ. ಹಾಗೇ ಆತನಿಗೆ ಪ್ರಶಸ್ತ್ಯ ಗೌರವಗಳು ದೊರೆಯುತ್ತವೆ. ಇವನ ಬಗ್ಗೆ ಹುಟ್ಟುವ ಎಲ್ಲಾ ವದಂತಿಗಳು ಅವನನ್ನು ಒಬ್ಬ ಆದರ್ಶ ವ್ಯಕ್ತಿ ಎಂದು ನಿರೂಪಿಸುತ್ತವೆ. ಆದರೆ ಪ್ರಸ್ತುತ ಆತ ಇದಕ್ಕೆ ತದ್ದಿರುದ್ಧವಾಗಿ ಇದ್ದ ವ್ಯಕ್ತಿ. ಹಾಗೂ ಈ ಬಗೆಯ ಕೀರ್ತಿ ಗೌರವಗಳನ್ನು ಆತ ನಿರೀಕ್ಷಿಸದವನು ಸಹವಾನೆ ಅಲ್ಲ. ಈ ರೀತಿ ಇಡೀ ನಾಟಕ ಗೊಂದಲದ ಗೂಡಾಗಿದೆ. ಇದು ಈ ನಾಟಕದ ವಸ್ತು.

18) **ಬೆಪ್ಪು ತಕ್ಕಡಿ** :- ಇದೂ ಒಂದು ಕೂಡ ಇಂಗ್ಲೀಷ್ ನಾಟಕದ ಅನುವಾದ ಯುದ್ಧದಲ್ಲಿ ಭಾಗವಹಿಸಿ ಅಪ್ರಯತ್ನ ಪೂರ್ವಕವಾದ ಗೌರವಗಳಿಗೆ ಪಾತ್ರನಾಗುವ ಒಬ್ಬ ವ್ಯಕ್ತಿಯ ಹಾಸ್ಯಮಯ ಪಾತ್ರದ ಚಿತ್ರಣ. ಈತ ತಾನು ಜನಗಳನ್ನು ತೃಪ್ತಿ ಪಡಿಸುತ್ತೇನೆಂದು ಮಾಡುವ ಕೆಲಸಗಳೆಲ್ಲ ಅದಕ್ಕೆ ವಿರುದ್ಧವಾಗಿ ಇವನಿಗೆ ಮುಖಭಂಗವಾಗುತ್ತದೆ. ಜನರನ್ನು ರೇಗಿಸಬೇಕು. ಕೋಪಗೊಳಸಬೇಕು. ಎಂದು ಮಾಡುವ ಪ್ರಯತ್ನಗಳೆಲ್ಲ ಅವನ ಆಶ್ರಯಕ್ಕೆ ವಿರುದ್ಧವಾಗಿ ಜನರಲ್ಲಿ ಹಾಸ್ಯವನ್ನು ಲವಲವಿಕೆಯನ್ನು ಉಂಟುಮಾಡಿ ಅವನನ್ನು ಪೇಚಿಗೆ ಗುರಿಮಾಡುತ್ತವೆ. ಹೀಗೆ ಆತನ ಎಲ್ಲಾ ಪ್ರಯತ್ನಗಳು ತದ್ ವಿರುದ್ಧವಾಗಿ ಆಗುವುದು ಮತ್ತು ಅವನು ಯಾರಾದರೂ ತಕ್ಕ ವ್ಯಕ್ತಿ ತನಗೆ ಮಾರ್ಗದರ್ಶನ ಮಾಡಿ ಎಂದು ಎಲ್ಲರನ್ನು ಕೇಳುವಂತಹ ಹಾಸ್ಯಾಸ್ಪದ ರೀತಿ ಅ ಊರಿನಲ್ಲಿ ಉಂಟಾಗುತ್ತದೆ. ಇದು ಈ ನಾಟಕದ ಸಾರಾಂಶ.

**ಇತರೆ** : 1. ಇವರು ಆಕಾಶವಾಣಿಗೆ 15 ಚಿಂತನ ಪ್ರಂಬಂಧಗಳನ್ನು ಬರೆದಿದ್ದಾರೆ. ಈ ಪ್ರಬಂಧಗಳನ್ನು ಹಬ್ಬಗಳು ಮುಂತಾದ ವಿಶಿಷ್ಟ ಸಂದರ್ಭಗಳಲ್ಲಿ ಬರೆಯಲಾಗಿದೆ. ಇವುಗಳನ್ನು 90-91 ರಿಂದ 94ರ ತನಕ ಆಕಾಶವಾಣಿಗೆ ಬರೆದಿದ್ದಾರೆ. ಇವುಗಳೇ ಅಲ್ಲದೇ ಸುಮಾರು 25 ಬಿಡಿ ಲೇಖನಗಳನ್ನು ಬರೆದಿದ್ದಾರೆ.

2) ಇವುಗಳ ಜೊತೆಗೆ ಪಾಶ್ಚಾತ್ಯ ದೇಶಗಳ ಸಾಹಿತ್ಯ ಚರಿತ್ರೆಗಳನ್ನು ಇಂಗ್ಲೀಷ್ ಮೂಲದಿಂದ ವಿಷಯ ಸಂಗ್ರಹಿಸಿ ಅನುವಾದಿಸಿ ಕನ್ನಡದಲ್ಲಿ ಸಾಹಿತ್ಯ ಚರಿತ್ರೆಯನ್ನು ಬರೆದಿದ್ದಾರೆ.

3) ಇವರು ತಮ್ಮ ನೆನಪು ನೆಹಿಗನೊಡನೆ ಎಂಬ ಹೆಸರಿನಿಂದ ನೆನಪುಗಳನ್ನು ಬರೆದಿದ್ದಾರೆ. ಇವುಗಳ ಜೊತೆಗೆ ಸುಮಾರು 50 ಕವನಗಳನ್ನು ಕೂಡ ರಚಿಸಿದ್ದಾರೆ. ಇವೆಲ್ಲ. ಹಸ್ತ ಪ್ರತಿಯ ರೂಪದಲ್ಲಿ ಇದ್ದು ಪ್ರಕಟಗೊಳ್ಳಬೇಕಾಗಿವೆ.

ಇ) **ಚಿಂತನ ಪ್ರಬಂಧಗಳು**

1) ಈದ್‌ಮಿಲಾದ್ 2) ಪ್ರಕೃತಿ ನಿತ್ಯ ನೂತನ 3) ನಮ್ಮ ಮೌಲ್ಯಗಳ ನಿಜವಾದ ಅರ್ಥವೇನು. 4) ಪರೋಪಕಾರ ಎಂಬುದರ ವಿಶ್ಲೇಷಣೆ. 5) ಆಮದು ನೀತಿ. 6) ಮೊಹರಂ. 7) ಮಾನವೀಯ ಮೌಲ್ಯಗಳು. 8) ಅಂತರಿಕ್ಷಯುಗ ಮತ್ತು ನಾವು. 9) ಬಕ್ರೀದ್ 10)ಗಾಂಧಿಜೀಯ ಮೂರು ತತ್ವಗಳು 11) ಭಾರ್ಯಾರೂಪವತಿ ಶತ್ರು ಎಂಬುದರ ನಿಜವಾದ ಅರ್ಥವೇನು 12) ತೆರ 13) ಕುರೂಪ 14) ಪರಿಸರಕ್ಕೆ ಹೊಂದುಕೊಳ್ಳಬೇಕು 15) ಮಾತೃವಾತ್ಸಲ್ಯ 16)ರಂಜಾನ್. 18) ಕಾಯ, ವಾಚ, ಮನಸಾ ಎಂಬುದರ ವ್ಯಾಖ್ಯೆ ಎಂಬ ಚಿಂತನ ಪ್ರಬಂಧಗಳನ್ನು ಬರೆದಿದ್ದಾರೆ. ಇವು ಆಕಾಶವಾಣಿಯಲ್ಲಿ ಪ್ರಸಾರವಾಗಿದೆ.

II. ಯೂರೋಪಿನ ಎಲ್ಲಾ ದೇಶಗಳ ಸಾಹಿತ್ಯ ಚರಿತ್ರೆಯಲ್ಲಿ ಇಂಗ್ಲೀಷ್ ಮೂಲದಿಂದ

ಸಂಗ್ರಹಿಸಿ ಅನುವಾದ ಮಾಡಿ ಒಂದು ಸಮಗ್ರ ಸಾಹಿತ್ಯ ಚರಿತ್ರೆಯನ್ನು ಪಾಶ್ಚಾತ್ಯ ಸಾಹಿತ್ಯ ಚರಿತ್ರೆ ಎಂಬ ಹೆಸರಿನಿಂದ ರಚಿಸಿದ್ದಾರೆ.

1. ಗ್ರೀಕ್ 2) ರೋಮನ್ 3) ಇಟಾಲಿಯನ್ 4) ಇಂಗ್ಲೀಷ್ 5) ಫ್ರೆಂಚ್ 6) ಜರ್ಮನ್ 7) ಸ್ಪೈನ್ 8) ಮತ್ತು ರಷ್ಯ ದೇಶದ ಸಾಹಿತ್ಯ ಚರಿತ್ರೆಗಳ ಒಂದು ಸಂಕ್ಷಿಪ್ತ ಚರಿತ್ರೆ ಇಲ್ಲಿ ಅಡಕಗೊಂಡಿದೆ.

III. ಇವುಗಳೇ ಅಲ್ಲದೇ ಇವರು 25 ಕಥಗಳನ್ನು 10 ಅನುವಾದತ ಕಥೆಗಳನ್ನು
ಬರೆದಿದ್ದಾರೆ. ಇಷ್ಟು ಕೂಡ ಹಸ್ತ ಪ್ರತಿಯ ರೂಪದಲ್ಲಿದೆ.

IV. ಇವರು ಸುಮಾರು 50 ಕವನಗಳನ್ನು ರಚಿಸಿದ್ದಾರೆ. ಇವು ಕೂಡ ಅಸ್ತ ಪ್ರತಿಯ ರೂಪದಲ್ಲಿ ಇವೆ.

V. ಇವುಗಳೇ ಅಲ್ಲದೇ ಆನೇಕ ಬಿಡಿ ಲೇಖನಗಳನ್ನು ಬರೆದಿದ್ದಾರೆ. ಅವುಗಳಲ್ಲಿ
1) ಬಸವಣ್ಣನವರ ಅನನ್ಯತೆ. 2) ಅಕ್ಕ ಮಹಾದೇವಿಯ ಅಪೂರ್ವತೆ 3) ಹಳೆಗನ್ನಡ ಸಾಹಿತ್ಯದ ಮೂರು ಮಹಾನ್ ಶಬ್ಧ ಚಿತ್ರಗಳು 4) ಕುಮಾರವ್ಯಾಸದಲ್ಲಿ ಹಾಸ್ಯ ಪ್ರಜ್ಞೆ. 5) ಲಕ್ಷ್ಮೀಶನ ಕಾವ್ಯದ ನಾಯಕರು ಅಪರಾಧಿಗಳೇ? 6) ನಮ್ಮ ಸಾಹಿತ್ಯದಲ್ಲಿ ಬದಲಾವಣೆ ಆಗಬೇಕೆ.
7) ಸಾಹಿತ್ಯ ಚಳುವಳಿಗಳ ಸೂಕ್ಷ್ಮ ನೋಟ ಮುಂತಾಗಿ ಕೆಲವು ಎಂದರೆ ಸುಮಾರು 30 ಬಿಡಿ ಲೇಖನಗಳನ್ನು ಬರೆದಿದ್ದಾರೆ. ಇವುಗಳು ಹಸ್ತಪ್ರತಿಯ ರೂಪದಲ್ಲಿವೆ.

## ಜಿ. ಪಿ.ಅಬ್ದುಲ್ ಸತ್ತಾರ್‌ರವರ.ಸಾಹಿತ್ಯದ ಓಟ್ಟು ನೋಟ.

ಕಳೆದ ಐವತ್ತು ದಶಕಗಳಲ್ಲಿ ಸಾಹಿತ್ಯದ ಕೃಷಿ ಮಾಡಿದ ಮಂಡ್ಯ ಜಿಲ್ಲೆಯ "ಭೀಷ್ಮ"ಎಂದರೆ ಅತಿಶೂಯೋಕ್ತಿ ಅಲ್ಲ ಇವರು ಧರ್ಮದಲ್ಲಿ ಇಸ್ಲಾಂಧರ್ಮದವರಗಿದ್ದು, ಮಾತೃಭಾಷೆಯಲ್ಲಿ ಉರ್ದುವಾಗಿದ್ದು ಸಾಹಿತ್ಯ ಆಸಕ್ತಿ ಮಾತ್ರ ಕನ್ನಡವಾಗಿರುವುದು. ನಾವೆಲ್ಲರು ಚಕಿತರಾಗುವ ಮೂಗಿನ ಮೇಲೆ ಬೆರಳಟ್ಟುಕೂಳ್ಳುವ ರೀತಿಯಲ್ಲಿ ಕನ್ನಡ ಸಾಹಿತ್ಯದ ರಚನೆಯನ್ನು ಮಾಡಿದ್ದಾರೆ.

ಇವರ ಸಾಹಿತ್ಯದಲ್ಲಿ ಧರ್ಮ, ಜಾತಿ, ಪ್ರೇಮ, ಸಾಮಾಜಿಕ ರಾಜಕೀಯ ಧೋರಣೆಗಳು, ವೀರತ್ವ, ಐತಿಹಾಸಿಕ ಶಾಸನಗಳು ಹಾಗೂ ಪುರಾತತ್ವಶಾಸನಗಳು ಈಗೇ ಅನೇಕ ರೀತಿಯ ವಿಭಾಗಗಳಲ್ಲಿ, ಸಾಹಿತ್ಯದ ರಚನೆಯಾಗಿರುವುದು ನಮ್ಮೆಲ್ಲರಿಗೆ ಕೊಡುಗೆಯಾಗಿದೆ.

ಇವರು ಸಾಹಿತ್ಯದಲ್ಲಿ ಅಷ್ಟೇ ಅಲ್ಲ. ಸಂಗ್ರಹವನ್ನು ಕೂಡ ಮಾಡಿರುವುದು ಇವರ ಮುಂದಾಲೋಚನಾ ಪ್ರಕ್ರಿಯೆಗೆ ನಾವೆಲ್ಲರು ಯಾವ ರೀತಿಯ ಕೃತಜ್ಞತೆ ಸಲ್ಲಿಸಿದರು ಸಾಲದು.

ತಮ್ಮ ಸಾಹಿತ್ಯದ ಮೂಲಕ ಜನ ಸಾಮಾನ್ಯರಿಗೆ ಅರ್ಥವಾಗುವ ಸರಳ ಭಾಷೆಯಲ್ಲಿ ಭಾಷಾ ಪ್ರೌಢಿಮೆಯಲ್ಲಿ ಸಹೃದಯರ ಮನಸ್ಸನ್ನು ಸೆಳೆದಿದ್ದಾರೆ.

ಸತ್ತಾರ್‌ರವರ ಸಾಹಿತ್ಯದಲ್ಲಿ ಸಜ್ಜನಿಕೆ. ನಿರ್ಭೀತ ಮಾನವತಾವಾದಿ ಅವರ ತತ್ವ ನಿಷ್ಠಧೋರಣೆ ಅವರು ರಾಜಿಗೊಪ್ಪದ ಸ್ವಭಾವ ಮೆಚ್ಚುವಂತಹದು ಇವರು ಮೌಲ್ಯ ಆರಾಧಕರು ಹಾಗೂ ಮಾತಿನಲ್ಲಿ ಬದ್ಧತೆಯುಳ್ಳ ವ್ಯಕ್ತಿ.

ಸತ್ತಾರ್‌ರವರು ಅನುಭವ ಮತ್ತು ಕಲಾತ್ಮಕತೆಯನ್ನು ಸಮ ಪ್ರಮಾಣದಲ್ಲಿ ಬೆಳಸಿಕೊಂಡಿದ್ದಾರೆ. ಮತ್ತು ಈ ನೆಲದ ದೇಶಿಯ ಭಾಷೆಯ ದೃಷ್ಟಿಯಿಂದ ಜಿಲ್ಲೆಯ ಇತರ ಸಾಹಿತಿಗಳಗಿಂತ ಇವರು ಭಿನ್ನವಾಗಿದ್ದಾರೆ.

ಈಗೋ ಅಬ್ದುಲ್ ಸತ್ತಾರ್‌ರವರು ಸಾಹಿತ್ಯವು ಇನ್ನು ಬೆಳೆಯುತ್ತಿರುವ ಖುಷಿ ವಿಚಾರವೇ ಸರಿ.

I. ಇವರು ಈವರೆಗೆ. ಒಟ್ಟು ಏಳು ಕಾದಂಬರಿಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಐದು ಪ್ರಕಟವಾಗಿವೆ. ಈ ಪೈಕಿ ನಾಲ್ಕು ಐತಿಹಾಸಿಕ, ಒಂದು ಸಾಮಾಜಿಕ ಒಂದು ಪತ್ತೆದಾರಿ ಒಂದು ಅಪೂರ್ಣ.

II. ಇವರು ಈವರೆಗೆ 25 ಕಥೆಗಳನ್ನು ಬರೆದಿದ್ದಾರೆ. 10 ಅನುವಾದಿಕ ಕಥೆಗಳು, ಈ ಪೈಕಿ 15 ಕಥೆಗಳು ಪ್ರಕಟವಾಗಿವೆ.

III. ಇವರು ಹದಿನೆಂಟು ನಾಟಕ ಬರೆದಿದ್ದಾರೆ. ಆ ಪೈಕಿ 15 ನಾಟಕಗಳು ಆಕಾಶವಾಣಿಯಲ್ಲಿ ಪ್ರಸಾರವಾಗಿವೆ. ಮೂರು ಅಪ್ರಕಟಿತ.

IV. ಇವರು 15 ಚಿಂತನ ಪ್ರಬಂಧ ಬರೆದಿದ್ದಾರೆ. ಅವೆಲ್ಲವೂ ಆಕಾಶವಾಣಿಯಲ್ಲಿ ಪ್ರಸಾರವಾಗಿವೆ.

V. ಇವರು 25 ಬಿಡಿ ಲೇಖನ ಬರೆದಿದ್ದಾರೆ. ಅವುಗಳಲ್ಲಿ 10 ಬೇರೆ, ಬೇರೆ ಪತ್ರಿಕೆಗಳಲ್ಲಿ ಮತ್ತು ಸಂಕಲನಗಳಲ್ಲಿ ಪ್ರಕಟವಾಗಿ 15 ಅಪ್ರಕಟಿತ.

VI. ಇವರು ಐವತ್ತು ಕವನಗಳನ್ನು ಬರೆದಿದ್ದಾರೆ.ಎಲ್ಲವೂ ಅಪ್ರಕಟಿತ.

VII. ಇವರು ಯೂರೋಪಿಯನ್ ದೇಶಗಳ ಸಾಹಿತ್ಯ ಕುರಿತಂತೆ ಇಂಗ್ಲೀಷ್

ಮೂಲದಿಂದ ವಿಷಯ ಸಂಗ್ರಹಿಸಿ ಒಂದು ಅನುವಾದ ಸಂಗ್ರಹ ರೂಪದಲ್ಲಿ ಪಾಶ್ಚಾತ್ಯ ಸಾಹಿತ್ಯ ಚರಿತ್ರೆ ಎಂಬ ಕೃತಿ ರಚಿಸಿದ್ದಾರೆ. ಇದೂ ಅಪ್ರಕಟಿತ.

VIII. ಇವರು ತಮ್ಮ ನೆನಪುಗಳನ್ನು ಕುರಿತಂತೆ ನೆನಪು ನೇಹಿಗನೊಡನೆ, ಎಂಬ ನೆನಪುಗಳ ಸಂಗ್ರಹ ರಚಿಸಿದ್ದಾರೆ.

IX. ಇವರು ತರೀಕೆರೆಯ ಪಾಳೇಗಾರರು ಎಂಬ ಐತಿಹಾಸಿಕ ಸಂಶೋದನ ಕೃತಿ ರಚಿಸಿದ್ದಾರೆ.

ಇದು ಈ ವರೆಗೆ ಇವರು ಮಾಡಿದ ಸಾಹಿತ್ಯ ಸೇವೆಯ ಒಟ್ಟಾರೆ ನೋಟ.

### ೬. ಉಪಸಂಹಾರ

ಕನ್ನಡ ಸಮರ್ಥ ಲೇಖಕರಲ್ಲಿ ಒಬ್ಬರಾದ ಪಿ.ಅಬ್ದುಲ್ ಸತ್ತಾರ್‌ರವರು ಆರು ಕಾದಂಬರಿಗಳನ್ನು (ಐತಿಹಾಸಿಕ ಮತ್ತು ಸಮಾಜಿಕ) ಬರೆದಿದ್ದಾರೆ. ವೈವಿಧ್ಯಮಯವಾದ ಕಾದಂಬರಿಗಳಲ್ಲಿ ಐತಿಹಾಸಿಕ ವ್ಯಕ್ತಿಗಳ ವೀರತ್ವ, ದೇಶಾಭಿಮಾನ, ಆಡಳತದ ವೈಖರಿಯನ್ನು ಮನೋಜ್ಞವಾಗಿ ಚಿತ್ರಿಸಲಾಗಿದೆ. ಸಂಶೋಧನಾ ಕೃತಿಯಲ್ಲಿ ತರೀಕೆರೆಯ ಪಾಳೆಗಾರರು ಎಂಬ ಸಂಶೋಧನಾ ಕೃತಿಯು ತರೀಕೆರೆಯ ಪಾಳೆಗಾರಿಕೆಯನ್ನು ಇಲ್ಲಿ ಬಿಂಬಿಸಲಾಗಿದೆ. ಇವುಗಳಲ್ಲದೆ ಕಥೆಗಳು. ನಾಟಕಗಳು. ಲೇಖನ. ಕವನಗಳನ್ನು, ಆಕಾಶವಾಣಿ ಮತ್ತು ಪತ್ರಿಕೆಯಲ್ಲಿ ಪ್ರಕಟ ಪಡಿಸಿದ್ದಾರೆ. ಇವರು ಕನ್ನಡ ಸಾಹಿತ್ಯ ಲೇಖಕರಲ್ಲಿ ಸಾಹಿತ್ಯಕ್ಕೆ ಮಾಡಿದ ಕೃಷಿಯು ಶ್ಲಾಘನೀಯವಾಗಿದೆ.

ಈಗ ಇವರಿಗೆ 83 ರ ಇಳಿ ವಯಸ್ಸು, ಅಸ್ವಸ್ಥರು ಆದರೂ ಇದರ ಪಭುತ್ವ ತಗ್ಗಿಲ್ಲ. ದೈಹಿಕ ದುರ್ಬಲತೆ ಇದ್ದರೂ ಬರೆಯುವ, ಓದುವು ವಿಚಾರ ಮಾಡುವ ತೀಕ್ಷ್ಣತೆ ಅಭಾಧಿತವಾಗಿವೆ. ಈ ಹಿರಿಯರು ಇನ್ನೂ ಬದುಕಿ ಯುವ ಜನತೆಗೆ ತಮ್ಮ ವಿಚಾರಗಳ ತಮ್ಮ ಸಾಹಿತ್ಯದ ಸಮಪಾಲನ್ನು ಹಂಚಿಕೊಳ್ಳುವ ಅವಕಾಶ ಸಿಗಲಿ ಎಂದು ಬಯಸುತ್ತೇನೆ.

## ೮. ಪರಾಮರ್ಶನ ಗ್ರಂಥಗಳು ಮತ್ತು ಸಾಹಿತ್ಯ.

**1) ಪ್ರಕಟಿತ ಗ್ರಂಥಗಳು :-**

1. ತರೀಕೆರೆಯ ಪಾಳೆಯಗಾರರು ಮತ್ತು ಅವರ ಇತಿಹಾಸ
2. ಹೈದರಾಲಿ ಭಾಗ I, II. (ಐತಿಹಾಸಿಕ ಕಾದಂಬರಿ)
3. ಟಿಪ್ಪುಸುಲ್ತಾನ್ (ಐತಿಹಾಸಕ ಕಾದಂಬರಿ)
4. ರಾಜಒಡೆಯರ್ (ಐತಿಹಾಸಿಕ ಕಾದಂಬರಿ)

5. ಸರ್ಜಾಪ್ಪನಾಯಕ (ನಿಶ್ಯಂಕ ಮಲ್ಲ) ಐತಿಹಾಸಕ ಕಾದಂಬರಿ

6. ಮರುಹುಟ್ಟು (ಸಾಮಾಜಿಕ ಕಾದಂಬರಿ)

I. ಪ್ರಭುದ್ಧ ಕರ್ನಾಟಕ ಜನ ಪ್ರಗತಿ ಪ್ರಜಾಮತ ಗೋಕುಲ, ಸೌರಭ, ಗಿರಿಮಲ್ಲಿಗೆ, ಹರತಿಸಿರಿ, ಶಿವಾರ್ಪಣೆ, ಮುಂತಾದ ಪತ್ರಿಕೆಗಳು ಮತ್ತು ಲೇಖನ ಸಂಗ್ರಹಗಳು. ಹಾಗೂ ಪತ್ರಿಕೆಗಳಲ್ಲಿ ಬಂದ ಬಿಡಿ ಲೇಖನಗಳು ಮತ್ತು ಕಥೆಗಳು.

II. ಆಕಾಶವಾಣಿಯಲ್ಲಿ ಪ್ರಸಾರವಾದ ನಾಟಕ, ಚಿಂತನ ಸಂದರ್ಶನ ಮುಂತಾದವು.

III. ಅಪ್ರಕಟಿತ (ಹಸ್ತ ಪ್ರತಿರೂಪದಲ್ಲಿರುವ) ಕೃತಿಗಳು

1. ಲೇಖನ ಸಂಗ್ರಹ
2. ಚಿಂತನ ಪ್ರಬಂಧಗಳ ಸಂಗ್ರಹ
3. ಕಥೆಗಳ ಸಂಗ್ರಹ
4. ಕವನಗಳ ಸಂಗ್ರಹ

## IV. ನಾಟಕಗಳ ಸಂಗ್ರಹ

ಇವುಗಳನ್ನು ಪರಾಮರ್ಶಿಸಲಾಗಿದೆ.